| | | |
|---|---|---|
| 22. | ಸರ್ಕಾರೇತರ ಸಂಘ ಸಂಸ್ಥೆಗಳು–3 ಜನರು<br>(ಸರ್ಕಾರದಿಂದ ನಾಮ ನಿರ್ದೇಶಿಸಲ್ಪಟ್ಟ)<br>1. ಶ್ರೀ ಅಬ್ದುಲ್ ಹಕ್ಕೀಂ, ಬಿ.ಎ; ಎಲ್.ಎಲ್.ಬಿ.<br>ಪತ್ರಕರ್ತರು, ಕರ್ನಾಟಕ ಫೆರ್‌ಪೆಕ್ಟ್, ಸೋಷಿಯಲ್ ಇನ್‌ಸ್ಟಿಟ್ಯೂಟ್, ಜೋಷಿಗಲ್ಲಿ, ಇಳ್ಕಲ್–587125.<br>ಬಾಗಲಕೋಟೆ ಜಿಲ್ಲೆ.<br>2. ಶ್ರೀ ಉತ್ತಮ್ ಚಂದ್ ಜೈನ್<br>ಅಖಿಲ ಕರ್ನಾಟಕ ಪ್ರಾಣಿ ದಯಾಸಂಘ, ಟ್ಯಾಂಕ್ ಬಂದ್ 80 ಅಡಿ ರಸ್ತೆ, ಕೋರಮಂಗಲ, 6ನೇ ಬ್ಲಾಕ್, ಬೆಂಗಳೂರು–560 095.<br>3. ಶ್ರೀ ಮುಬಷೀರ್ ಅಹಮ್ಮದ್, ಬಿ.ಇ.<br>ನಂ. 3486, 3ನೇ ಮೈನ್, ಆದರ್ಶನಗರ್, ಹಾಸನ. | <br><br>ಸದಸ್ಯರು<br><br><br>ಸದಸ್ಯರು<br><br>ಸದಸ್ಯರು |
| 23. | ಇತರೇ ಸದಸ್ಯರು–3 ಜನರು<br>(ಸರ್ಕಾರದಿಂದ ನಾಮ ನಿರ್ದೇಶಿಸಲ್ಪಟ್ಟ)<br>1. ಶ್ರೀ ಎ.ಎ.ಗಂಜನ್ನವರ್, ವಕೀಲರು<br>ಬಂಕಾಪುರ, ಶಿಗ್ಗಾಂ, ತಾಲ್ಲೂಕು,<br>2. ಡಾ: ಮೊಹಿಸೀನ್,ಎಂ.ಬಿ.ಬಿ.ಎಸ್ (ಆರ್ತೋ)<br>ನಂ. 1, ವಿಶ್ವೇಶ್ವರಯ್ಯನಗರ, ಹುಬ್ಬಳ್ಳಿ–32.<br>3. ಶ್ರೀ ಶಿವಮೊಗ್ಗ ಮುನೀರ್,<br>(ನಿವೃತ್ತ ಉಪನ್ಯಾಸಕರು): ಆಸಕ್ತಿ,<br>4ನೇ ಕ್ರಾಸ್, ಬಸವನಗುಡಿ, ಶಿವಮೊಗ್ಗ. | <br>ಸದಸ್ಯರು<br><br><br>ಸದಸ್ಯರು<br><br><br>ಸದಸ್ಯರು |
| 24. | ಕಾರ್ಯದರ್ಶಿಗಳು, ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ. | ಸದಸ್ಯ ಕಾರ್ಯದರ್ಶಿಗಳು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ನಿಸಾರ್ ಅಹಮದ್**
ಸರ್ಕಾರದ ಅಧೀನ ಕಾರ್ಯದರ್ಶಿ
ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ

# ವಿಶೇಷ ಪತ್ರಿಕೆ



| ಭಾಗ – I | ಬೆಂಗಳೂರು, ಶನಿವಾರ, ಜನವರಿ ೧೭, ೨೦೦೯ (ಪುಷ್ಯ ೨೭, ಶಕ ವರ್ಷ ೧೯೩೦) | ನಂ. ೨೨ |
|---|---|---|



**ಕರ್ನಾಟಕ ಸರ್ಕಾರದ ನಡವಳಿಗಳು**
**ಸಹಕಾರ ಸಚಿವಾಲಯ**

**ವಿಷಯ :** ದಿನಾಂಕ : 31.03.2009 ರಲ್ಲಿದ್ದಂತೆ ಸಹಕಾರ ಸಂಘಗಳಿಗೆ ಚುನಾವಣೆಯನ್ನು ನಡೆಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ನಿಬಂಧಕರ ಕಛೇರಿ ಪತ್ರ ಸಂಖ್ಯೆ: ಸಸಂನಿ/117/ಆರ್‌ಎಸ್‌ಆರ್/2008–09, ದಿನಾಂಕ: 15.01.2009

**ಪ್ರಸ್ತಾವನೆ :**

ದಿನಾಂಕ : 31.03.2009ಕ್ಕೆ ಪದಾವಧಿ ಮುಕ್ತಾಯವಾಗುವ ಸಹಕಾರ ಸಂಘಗಳ ಆಡಳಿತ ಸಮಿತಿಗಳಿಗೆ ದಿನಾಂಕ : 31.03.2009ರೊಳಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರನ್ವಯ ಚುನಾವಣೆಗಳನ್ನು ನಡೆಸಬೇಕಾಗಿರುತ್ತದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(2)ರ ಪ್ರಕಾರ ಚುನಾವಣಾ ದಿನಾಂಕವನ್ನು ಗೊತ್ತುಪಡಿಸುವ ಅಧಿಕಾರವು ಸಂಬಂಧಪಟ್ಟ ಸಹಕಾರ ಸಂಘಗಳ ಆಡಳಿತ ಸಮಿತಿಗಳಿಗೆ ಇದ್ದು ಹಾಗೆ ದಿನಾಂಕವನ್ನು ನಿಗದಿಪಡಿಸುವಾಗ ಪ್ರಾಥಮಿಕ / ಮಾಧ್ಯಮಿಕ ಸಹಕಾರ ಸಂಘಗಳ ಚುನಾವಣೆಗಳನ್ನು ಮೊದಲ ಹಂತದಲ್ಲಿ, ಫೆಡರಲ್ ಸಹಕಾರ ಸಂಘಗಳ ಚುನಾವಣೆಗಳನ್ನು ಎರಡನೇ ಹಂತದಲ್ಲಿ ಮತ್ತು ಅಪೆಕ್ಸ್ ಸಹಕಾರ ಸಂಘಗಳ ಚುನಾವಣೆಗಳನ್ನು ಮೂರನೇ ಹಂತದಲ್ಲಿ ನಡೆಸುವುದು ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಪ್ರಜಾಸತ್ತಾತ್ಮಕ ಆಡಳಿತ ವ್ಯವಸ್ಥೆಯನ್ನು ಸುಭದ್ರಗೊಳಿಸುವ ದೃಷ್ಟಿಯಿಂದ ನ್ಯಾಯೋಚಿತವಾಗಿರುತ್ತದೆ. ಹೀಗೆ ಮಾಡಿದಲ್ಲಿ 2ನೇ ಹಂತದಲ್ಲಿ ಮತ್ತು 3ನೇ ಹಂತದಲ್ಲಿ ನಡೆಯುವ ಸಹಕಾರ ಸಂಘಗಳ ಚುನಾವಣೆಗಳಲ್ಲಿ ಕೆಳಹಂತದ ಸಂಘಗಳಿಂದ ಹೊಸದಾಗಿ ಚುನಾಯಿತರಾದ ಸದಸ್ಯರು ಪ್ರತಿನಿಧಿಸಲು ಸಹಾಯಕವಾಗುತ್ತದೆ.

ಈ ಹಿನ್ನೆಲೆಯಲ್ಲಿ ಎಲ್ಲಾ ಫೆಡರಲ್ ಮತ್ತು ಅಪೆಕ್ಸ್ ಸಹಕಾರ ಸಂಘಗಳ ಆಡಳಿತ ಸಮಿತಿಗಳಿಗೆ ದಿನಾಂಕ : 31.03.2009ರೊಳಗೆ ನಡೆಯಬೇಕಿರುವ ಚುನಾವಣೆಗಳನ್ನು ಅಲ್ಪಕಾಲದವರೆಗೆ ಮುಂದೂಡುವುದು ಮತ್ತು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2) ಅನ್ನು ಸ್ವಲ್ಪಮಟ್ಟಿಗೆ ಸಡಿಲಗೊಳಿಸುವುದು ಸೂಕ್ತವೆಂದು ಸರ್ಕಾರವು ಪರಿಗಣಿಸುತ್ತದೆ.

ಆದುದರಿಂದ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 12 ಸಿಎಲ್ಎಂ 2009, ಬೆಂಗಳೂರು ದಿನಾಂಕ : 17–01–2009**

ಮೇಲ್ಕಂಡ ಪರಿಸ್ಥಿತಿಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2) ಅನ್ನು ಮಾರ್ಪಾಟು ಮಾಡಿ ದಿನಾಂಕ : 31.03.2009ರೊಳಗೆ ಚುನಾವಣೆ ನಡೆಸಬೇಕಾದ ಸಹಕಾರ ಸಂಘಗಳು ಕೆಳಕಂಡಂತೆ ಚುನಾವಣಾ ದಿನಾಂಕಗಳನ್ನು ನಿಗದಿಪಡಿಸತಕ್ಕದ್ದು ಎಂದು ನಿರ್ದೇಶಿಸುತ್ತದೆ.

| ಕ್ರ. ಸಂ. | ಚುನಾವಣೆ ನಡೆಸಬೇಕಾದ ಸಹಕಾರ ಸಂಘಗಳು | ಆಡಳಿತ ಸಮಿತಿಗಳಿಗೆ ಚುನಾವಣೆ ನಡೆಸಬೇಕಾದ ಅವಧಿ | ಪದಾಧಿಕಾರಿಗಳ ಚುನಾವಣೆ ಮತ್ತು ಮೇಲ್ಮಟ್ಟದ ಸಹಕಾರ ಸಂಘಗಳಿಗೆ ಪ್ರತಿನಿಧಿ ಆಯ್ಕೆ ನಡೆಸಬೇಕಾದ ದಿನಾಂಕ |
|---|---|---|---|
| 01. | ಪ್ರಾಥಮಿಕ & ಮಾಧ್ಯಮಿಕ ಸಹಕಾರ ಸಂಘಗಳು | 16.03.2009 ರಿಂದ 20.03.2009 | 01.04.2009 |
| 02. | ಫೆಡರಲ್ ಸಹಕಾರ ಸಂಘಗಳು | 10.04.2009 | 20.04.2009ರೊಳಗೆ |
| 03. | ಅಪೆಕ್ಸ್ ಸಹಕಾರ ಸಂಘಗಳು | 30.04.2009 | ಪ್ರಕರಣ 29 ಎಫ್ ಅನ್ವಯ |

**ಸೂಚನೆ:**

1. ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:30.04.2009ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನ: ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

2. ಈ ಮಾರ್ಪಾಟು ಈಗಾಗಲೇ ಆಡಳಿತ ಸಮಿತಿಗಳಿಗೆ ಚುನಾವಣೆ ನಡೆಸಿರುವ ಮತ್ತು ಚುನಾವಣೆ ನಡೆಸಲು ಚುನಾವಣಾ ವೇಳಾ ಪಟ್ಟಿಯನ್ನು ಪ್ರಕಟಿಸಿರುವ ಹಾಗೂ ನ್ಯಾಯಾಲಯದ ನಿರ್ದಿಷ್ಟ ಆದೇಶಗಳ ಮೇರೆಗೆ ಚುನಾವಣೆ ನಡೆಸುವ ಸಹಕಾರ ಸಂಘಗಳಿಗೆ ಅನ್ವಯವಾಗುವುದಿಲ್ಲ.

3. ಹೊಸದಾಗಿ ಚುನಾಯಿತವಾದ ಆಡಳಿತ ಸಮಿತಿಗಳು ಮಾತ್ರ ಮೇಲ್ಮಟ್ಟದ ಸಹಕಾರಿ ಸಂಸ್ಥೆಗಳಿಗೆ ಪ್ರತಿನಿಧಿಗಳನ್ನು ಆಯ್ಕೆ ಮಾಡಿ ಕಳುಹಿಸತಕ್ಕದ್ದು.

4. ಫೆಡರಲ್ ಮತ್ತು ಅಪೆಕ್ಸ್ ಸಹಕಾರ ಸಂಘಗಳ ಆಡಳಿತ ಸಮಿತಿಗಳಿಗೆ ಚುನಾವಣೆ ನಡೆಯುವವರೆಗೆ ಈಗಿರುವ ಆಡಳಿತ ಸಮಿತಿಗಳೇ ಮುಂದುವರೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಶನಿವಾರ, ಜನವರಿ ೧೭, ೨೦೦೯ (ಪುಷ್ಯ ೨೭, ಶಕ ವರ್ಷ ೧೯೩೦) | ನಂ. ೨೩ |
|---|---|---|

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಸುತ್ತೋಲೆ

**ಸಂಖ್ಯೆ : ಸಿಆಸುಇ 55 ಸೇನೆನಿ 2008, ಬೆಂಗಳೂರು, ದಿನಾಂಕ : 15ನೇ ಜನವರಿ, 2009**

**ವಿಷಯ :** ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ನೇಮಕಾತಿಗೆ ನಿಗದಿಪಡಿಸಿದ ಗರಿಷ್ಠ ವಯೋಮಿತಿಯನ್ನು 2 ವರ್ಷ ಹೆಚ್ಚಿಸುವ ಬಗ್ಗೆ.

ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 6 ರಲ್ಲಿ ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ನೇಮಕಾತಿ ಬಯಸಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳಿಗೆ ಈ ಕೆಳಕಂಡಂತೆ ಕನಿಷ್ಠ ಹಾಗೂ ಗರಿಷ್ಠ ವಯೋಮಿತಿಯನ್ನು ನಿಗದಿಪಡಿಸಲಾಗಿತ್ತು :

| ಕ್ರ. ಸಂ. | ಪ್ರವರ್ಗ | ಕನಿಷ್ಠ ವಯೋಮಿತಿ | ಗರಿಷ್ಠ ವಯೋಮಿತಿ |
|---|---|---|---|
| 1 | ಸಾಮಾನ್ಯ | 18 ವರ್ಷಗಳು | 33 ವರ್ಷಗಳು |
| 2 | ಇತರೆ ಹಿಂದುಳಿದ ವರ್ಗಗಳು | 18 ವರ್ಷಗಳು | 36 ವರ್ಷಗಳು |
| 3 | ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಪ್ರವರ್ಗ–1 | 18 ವರ್ಷಗಳು | 38 ವರ್ಷಗಳು |

2. ಮೇಲ್ಕಂಡ ನಿಯಮಗಳ ನಿಯಮ 6(1)ನ್ನು ತಿದ್ದುಪಡಿ ಮಾಡಿ ಗರಿಷ್ಠ ವಯೋಮಿತಿಯನ್ನು 2 ವರ್ಷಗಳಷ್ಟು ಹೆಚ್ಚಿಸಲು ದಿನಾಂಕ 6.11.2008 ರಂದು ಸಚಿವ ಸಂಪುಟವು ಅನುಮೋದನೆಯನ್ನು ನೀಡಿದ್ದು, ಅದರಂತೆ ದಿನಾಂಕ 17.11.2008ರ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 42 ಎಸ್‌ಆರ್‌ಆರ್ 2008ರಲ್ಲಿ ಕರಡು ನಿಯಮಗಳನ್ನು ಹೊರಡಿಸಲಾಗಿತ್ತು. ಈ ನಿಯಮಗಳನ್ನು ದಿನಾಂಕ 18.12.2008 ರಂದು ಅಂತಿಮವಾಗಿ ಪ್ರಕಟಿಸಲಾಗಿದೆ. ಈ ತಿದ್ದುಪಡಿಯಿಂದಾಗಿ ದಿನಾಂಕ 18.12.2008 ರಿಂದ ಗರಿಷ್ಠ ವಯೋಮಿತಿಯನ್ನು ಈ ಕೆಳಕಂಡಂತೆ ಹೆಚ್ಚಿಸಲಾಗಿದೆ.

| ಕ್ರ. ಸಂ. | ಪ್ರವರ್ಗ | ಕನಿಷ್ಠ ವಯೋಮಿತಿ | ಗರಿಷ್ಠ ವಯೋಮಿತಿ |
|---|---|---|---|
| 1 | ಸಾಮಾನ್ಯ | 18 ವರ್ಷಗಳು | 35 ವರ್ಷಗಳು |
| 2 | ಇತರೆ ಹಿಂದುಳಿದ ವರ್ಗಗಳು | 18 ವರ್ಷಗಳು | 38 ವರ್ಷಗಳು |
| 3 | ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಪ್ರವರ್ಗ–1 | 18 ವರ್ಷಗಳು | 40 ವರ್ಷಗಳು |

3. ಸರ್ಕಾರದ ಬಹುಪಾಲು ಇಲಾಖೆಗಳ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಮೇಲ್ಕಂಡ ಕನಿಷ್ಠ ಮತ್ತು ಗರಿಷ್ಠ ವಯೋಮಿತಿಯನ್ನು ಅಳವಡಿಸಿಕೊಳ್ಳಲಾಗಿದೆ. ಕೆಲವು ಇಲಾಖೆಗಳ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಮೇಲ್ಕಂಡ ಕನಿಷ್ಠ ಮತ್ತು ಗರಿಷ್ಠ ವಯೋಮಿತಿಗೆ ಭಿನ್ನವಾದ ವಯೋಮಿತಿಯನ್ನು ನಿಗದಿಪಡಿಸಲಾಗಿದೆ. ಉದಾಹರಣೆಗೆ, ಪೊಲೀಸು ಸಬ್‌ಇನ್ಸ್‌ಪೆಕ್ಟರ್ ವೃಂದಕ್ಕೆ ಕಡಿಮೆ ವಯೋಮಿತಿಯನ್ನು (ಅಂದರೆ 24 ಮತ್ತು 26 ವರ್ಷಗಳು)

ನಿಗದಿಪಡಿಸಲಾಗಿದೆ; ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಹೆಚ್ಚಿನ ವಯೋಮಿತಿ (ಅಂದರೆ 40, 43, 45 ವರ್ಷಗಳು)ಯನ್ನು ನಿಗದಿಪಡಿಸಲಾಗಿದೆ. ಇಂತಹ ಇಲಾಖೆಗಳಿಗೆ ಸಂಬಂಧಿಸಿದಂತೆ ಗರಿಷ್ಠ ವಯೋಮಿತಿಯ ಹೆಚ್ಚಳ ಜಾರಿಗೆ ಬರಬೇಕಾದಲ್ಲಿ ಸಂಬಂಧಿತ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಬೇಕಾಗುತ್ತದೆ. ಹೀಗೆ ತಿದ್ದುಪಡಿ ಮಾಡುವ ಪ್ರಕ್ರಿಯೆಯು ದೀರ್ಘವಾದ ಪ್ರಕ್ರಿಯೆಯಾಗಿದೆ. ಈ ಪ್ರಕ್ರಿಯೆಯನ್ನು ತುರ್ತಾಗಿ ನಡೆಸಲು ಈ ಕೆಳಕಂಡಂತೆ ಕ್ರಮ ಕೈಗೊಳ್ಳಬಹುದಾಗಿದೆ.

(i) ದಿನಾಂಕ 6.11.2008 ರಂದು ಸಚಿವ ಸಂಪುಟವು ಅನುಮೋದಿಸಿದ ಗರಿಷ್ಠ ಮಿತಿಗಿಂತ ಕಡಿಮೆ ಗರಿಷ್ಠ ಮಿತಿಯನ್ನು ನಿಗದಿಪಡಿಸಿರುವ ಇಲಾಖೆಗಳು ಆ ಗರಿಷ್ಠ ಮಿತಿಯನ್ನು 2 ವರ್ಷಗಳಷ್ಟು ಹೆಚ್ಚಿಸಲು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಲು ಸಂಬಂಧಿತ ಸಚಿವರ ಅನುಮೋದನೆಯನ್ನು ಪಡೆದು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯಿಂದ ಕರಡು ತಿದ್ದುಪಡಿಯನ್ನು ಪರಿಶೋಧಿಸಿಕೊಂಡು ಅದನ್ನು ಪ್ರಕಟಿಸುವುದು.

(ii) ದಿನಾಂಕ 6.11.2008 ರಂದು ಸಚಿವ ಸಂಪುಟವು ಅನುಮೋದಿಸಿದ ಗರಿಷ್ಠ ಮಿತಿಗಿಂತ ಹೆಚ್ಚಿನ ಗರಿಷ್ಠ ಮಿತಿಯನ್ನು ಈಗಾಗಲೇ ನಿಗದಿಪಡಿಸಿರುವ ಇಲಾಖೆಗಳು ಈಗಿರುವ ಗರಿಷ್ಠ ಮಿತಿಯನ್ನು ಯಾವುದೇ ಬದಲಾವಣೆಯಿಲ್ಲದೆ ಮುಂದುವರಿಸುವುದು. ಒಂದು ವೇಳೆ ಗರಿಷ್ಠ ಮಿತಿಯನ್ನು ಇನ್ನೂ ಹೆಚ್ಚಿಸಬೇಕೆಂದು ಇಲಾಖೆಯು ತೀರ್ಮಾನಿಸಿದಲ್ಲಿ ತಿದ್ದುಪಡಿ ನಿಯಮವನ್ನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯಿಂದ ಪರಿಶೋಧಿಸಿಕೊಂಡು ಸಚಿವ ಸಂಪುಟದ ಪೂರ್ವಾನುಮೋದನೆಯನ್ನು ಪಡೆಯುವುದು.

4. ಮೇಲ್ಕಂಡಂತೆ ಕ್ರಮ ಕೈಗೊಳ್ಳಲು ಎಲ್ಲಾ ಇಲಾಖೆಗಳಿಗೆ ತಿಳಿಸಲಾಗಿದೆ.

**ದೇವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು – 1)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜನವರಿ ೨೦, ೨೦೦೯ (ಪುಷ್ಯ ೩೦, ಶಕ ವರ್ಷ ೧೯೩೦) | ನಂ. ೨೪ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. LGA/BLA/8/2008, Bangalore, Camp: Belagavi, Dated : 20th January, 2009**

The following Bill was introduced in Legislative Assembly on 20.1.2009.

**THE KARNATAKA RENT (AMENDMENT) BILL, 2008**

**(L.A. Bill No. 8 of 2008)**

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಎರಡನೇ ಅಧಿವೇಶನ**

**ಕರ್ನಾಟಕ ಬಾಡಿಗೆ (ತಿದ್ದುಪಡಿ) ವಿಧೇಯಕ, 2008**

**(2008ರ ವಿಧಾನಸಭೆಯ ವಿಧೇಯಕ ಸಂಖ್ಯೆ 8)**

ಕರ್ನಾಟಕ ಬಾಡಿಗೆ ಅಧಿನಿಯಮ, 1999ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಬಾಡಿಗೆ ಅಧಿನಿಯಮ, 1999ನ್ನು (2001ರ ಕರ್ನಾಟಕ ಅಧಿನಿಯಮ ಸಂಖ್ಯೆ 34) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಐವತ್ತೊಂಬತ್ತನೆ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ ;

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ:–** (1) ಈ ಅಧಿನಿಯಮವನ್ನು ಕರ್ನಾಟಕ ಬಾಡಿಗೆ (ತಿದ್ದುಪಡಿ) ಅಧಿನಿಯಮ, 2008 ಎಂದು ಕರೆಯತಕ್ಕದ್ದು.

**(2)** ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ಬಾಡಿಗೆ ಅಧಿನಿಯಮ, 1999 ರಲ್ಲಿ (2001ರ ಕರ್ನಾಟಕ ಅಧಿನಿಯಮ 34), 3ನೇ ಪ್ರಕರಣದ (ಎನ್) ಖಂಡದಲ್ಲಿ (ii)ನೇ ಬಾಬಿನ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ :–

"(iii) ತನ್ನ ಗಂಡನು ಸಂಸಾರ ಹೂಡಿದ್ದ ಮನೆಯಲ್ಲಿ ಅಥವಾ ಬಾಡಿಗೆದಾರನಾಗಿದ್ದ ಆವರಣದಲ್ಲಿ ವಾಸವಾಗಿದ್ದ ಅಥವಾ ವಾಸವಾಗಿರಲು ಹಕ್ಕುಳ್ಳ ಬಾಡಿಗೆದಾರನ ಪರಿತ್ಯಕ್ತ ಪತ್ನಿ ; ಮತ್ತು

(iv) ವಿಚ್ಛೇದನದ ಡಿಕ್ರಿಯಲ್ಲಿ ಸಂಸಾರ ಹೂಡಿದ್ದ ಮನೆಯಲ್ಲಿ ಅಥವಾ ಬಾಡಿಗೆ ಇದ್ದ ಆವರಣದಲ್ಲಿ ವಾಸ ಮಾಡುವುದಕ್ಕೆ ಆಕೆಗೆ ಹಕ್ಕಿದೆ ಎನ್ನುವುದು ಒಂದು ಷರತ್ತಾಗಿ ಇರುವಂಥ ಒಂದು ವಿಚ್ಛೇದನದ ಡಿಕ್ರಿಯನ್ನು ಹೊಂದಿರುವ ಬಾಡಿಗೆದಾರನ ವಿಚ್ಛೇದಿತ ಪತ್ನಿ."

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಬಿಎಲ್‌ಆರ್ 2005 ಕರ್ನಾಟಕ 1721 ರಲ್ಲಿ ವರದಿಯಾದ ಬಿ.ಪಿ. ಅಚಲಾ ಆನಂದ್–ವಿರುದ್ಧ–ಎಸ್. ಅಪ್ಪಿ ರೆಡ್ಡಿ ಮತ್ತು ಇನ್ನೊಬ್ಬರು, ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯದ ತೀರ್ಪಿನಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಗಮನದಲ್ಲಿಟ್ಟುಕೊಂಡು, ತನ್ನ ಗಂಡನು ಸಂಸಾರ ಹೂಡಿದ ಮನೆ ಅಥವಾ ಬಾಡಿಗೆದಾರನಾಗಿದ್ದ ಆವರಣದಲ್ಲಿ ವಾಸವಾಗಿದ್ದ ಅಥವಾ ವಾಸವಾಗಿರಲು ಹಕ್ಕುಳ್ಳ ಬಾಡಿಗೆದಾರನ ಪರಿತ್ಯಕ್ತ ಪತ್ನಿಗೆ ಮತ್ತು ಸಂಸಾರ ಹೂಡಿದ್ದ ಮನೆ ಅಥವಾ ಬಾಡಿಗೆ ಇದ್ದ ಆವರಣದಲ್ಲಿ ವಾಸ ಮಾಡಲು ಆಕೆಗೆ ಹಕ್ಕಿರತಕ್ಕದ್ದು ಎಂಬುದನ್ನು ಒಂದು ಷರತ್ತಾಗಿ ಸೇರಿಸಿರುವಂತಹ ಒಂದು ವಿಚ್ಛೇದನದ ಡಿಕ್ರಿಯನ್ನು ಹೊಂದಿರುವ ಬಾಡಿಗೆದಾರನ ವಿಚ್ಛೇದಿತ ಪತ್ನಿಗೆ ಬಾಡಿಗೆದಾರಿಗೆ ಹಕ್ಕನ್ನು ಕಲ್ಪಿಸುವುದಕ್ಕಾಗಿ ಕರ್ನಾಟಕ ಬಾಡಿಗೆ ಅಧಿನಿಯಮ, 1999ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮದಿಂದಾಗಿ ಯಾವ ವೆಚ್ಚವೂ ಉಂಟಾಗುವುದಿಲ್ಲ.

**ಜಿ. ಕರುಣಾಕರರೆಡ್ಡಿ**

ಕಂದಾಯ ಸಚಿವರು.

**ಎಸ್.ಬಿ. ಪಾಟೀಲ್**

ಕಾರ್ಯದರ್ಶಿ,

ಕರ್ನಾಟಕ ವಿಧಾನ ಸಭೆ.

**ಅನುಬಂಧ**

**ಕರ್ನಾಟಕ ಬಾಡಿಗೆ ಅಧಿನಿಯಮ, 1999ನ್ನು, (2001ರ ಕರ್ನಾಟಕ ಅಧಿನಿಯಮ 34)**

**ಉದ್ಧೃತ ಭಾಗ**

XX XX XX

3. **ಪರಿಭಾಷೆಗಳು.– ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು.–**

(ಎ) XX XX XX

(ಎನ್) "ಬಾಡಿಗೆದಾರ" ಎಂದರೆ ಯಾವ ವ್ಯಕ್ತಿಯಿಂದ ಅಥವಾ ಯಾರಿಗಾಗಿ ಅಥವಾ ಯಾರ ಪರವಾಗಿ ಯಾವುದೇ ಆವರಣದ ಬಾಡಿಗೆಯನ್ನು ಸಂದಾಯ ಮಾಡಬೇಕಾಗಿದೆಯೋ ಅಥವಾ ಯಾವುದೇ ವಿಶೇಷ ಕರಾರು ಇರದಿದ್ದ ಸಂದರ್ಭದಲ್ಲಿ ಅದನ್ನು ಸಂದಾಯ ಮಾಡಬೇಕಾಗುತ್ತಿತ್ತೋ ಆ ವ್ಯಕ್ತಿ: ಮತ್ತು ಇದು.–

(i) ಒಳ ಬಾಡಿಗೆದಾರ ;

(ii) ಬಾಡಿಗೆದಾರಿಕೆಯು ಮುಕ್ತಾಯವಾದ ತರುವಾಯ ಸ್ವಾಧೀನತೆಯಲ್ಲಿ ಮುಂದುವರಿಯುವ ಯಾವೊಬ್ಬ ವ್ಯಕ್ತಿಯನ್ನು ಒಳಗೊಳ್ಳುತ್ತದೆ. ಆದರೆ ಇದು 1882ರ ಭಾರತೀಯ ಅನುಭೋದ ಹಕ್ಕುಗಳ ಅಧಿನಿಯಮದ (1882ರ ಕೇಂದ್ರ ಅಧಿನಿಯಮ 5) 52ನೇ ಪ್ರಕರಣದಲ್ಲಿ ಪರಿಭಾಷಿಸಲಾದಂತೆ ಲೈಸೆನ್ಸ್ ನೀಡಲಾಗಿರುವ ಯಾವೊಬ್ಬ ವ್ಯಕ್ತಿಯನ್ನು ಒಳಗೊಳ್ಳುವುದಿಲ್ಲ.

XX XX XX

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**SECOND SESSION**

## THE KARNATAKA RENT (AMENDMENT) BILL, 2008

**(L.A. Bill No. 8 of 2008)**

A Bill further to amend the Karnataka Rent Act, 1999.

Whereas it is expedient further to amend the Karnataka Rent Act, 1999 (Karnataka Act 34 of 2001) for the purpose hereinafter appearing ;

Be it enacted by the Karnataka State Legislature in the fifty ninth year of the Republic of India, as follows :-

**1. Short Title and commencement.-** (1) This Act may be called the Karnataka Rent (Amendment) Act, 2008.

(2) It shall come into force at once.

**2. Amendment of section 3.-** In the Karnataka Rent Act, 1999 (Karnataka Act 34 of 2001), in section 3, in clause (n), after item (ii), the following shall be inserted, namely :-

"(iii) A deserted wife of a tenant who has been or is entitled to be in occupation of the matrimonial home or tenanted premises of husband ; and

(iv) a divorced wife of a tenant who has a decree of divorce in which the right of residence in the matrimonial home or tenanted premises has been incorporated as one of the conditions of the decree of divorce."

**STATEMENT OF OBJECTS AND REASONS**

In view of the observations of Supreme Court in B.P. Achala Anand Vs.S. Appi Reddy and another reported in ILR 2005 KAR 1721, it is considered necessary to amend the Karnataka Rent Act, 1999 to provide for tenancy right in respect of a deserted wife of a tenant, who has been or is entitled to be in occupation of the matrimonial home or tenanted premises of husband and a divorced wife of a tenant, who has a decree of divorce in which the right of residence in the matrimonial home or tenanted premises has been incorporated as one of the conditions of the decree of divorce.

Hence the Bill,

**FINANCIAL MEMORANDUM**

There is no financial implication by the proposed measure.

**G. KARUNAKARA REDDY**
Minister for Revenue

**S.B. PATIL**
Secretary
Karnataka Legislative Assembly.

**ANNEXURE**

EXTRACT FROM THE KARNATAKA RENT ACT, 1999

(KARNATAKA ACT 34 OF 2001)

**XX XX XX**

3. (n) "tenant" means.- **XX**

(i) a sub-tenant ;

(ii) any person continuing in possession after the termination of his tenancy, but does not include any person to whom a licence as defined in section 52 of the Indian Easements Act, 1882 (Central Act 5 of 1882) has been granted:

**XX** **XX** **XX**

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಮಂಗಳವಾರ, ಜನವರಿ ೨೦, ೨೦೦೯ (ಪುಷ್ಯ ೩೦, ಶಕ ವರ್ಷ ೧೯೩೦) | ನಂ. ೨೫ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. LGA/BLA/1/2009, Bangalore, Camp: Belagavi, Dated : 20th January, 2009**

The following Bill was introduced in Legislative Assembly on 20.1.2009.

**THE BANGALORE METROPOLITAN REGION DEVELOPMENT AUTHORITY (AMENDMENT) BILL, 2009**
**(L.A. Bill No. 1 of 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಎರಡನೇ ಅಧಿವೇಶನ**

**ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ (ತಿದ್ದುಪಡಿ) ವಿಧೇಯಕ, 2009**
**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 1)**

ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 1985 ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇದರಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 1985 ನ್ನು (1985ರ ಕರ್ನಾಟಕ ಅಧಿನಿಯಮ 39) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಐವತ್ತೊಂಬತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ (ತಿದ್ದುಪಡಿ) ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

2. **16ನೇ ಪಕರಣದ ತಿದ್ದುಪಡಿ.–** ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, 1985 ರ (1985ರ ಕರ್ನಾಟಕ ಅಧಿನಿಯಮ 39)16ನೇ ಪ್ರಕರಣದಲ್ಲಿ, (3)ನೇ ಉಪ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"**(3) ಪ್ರಾಧಿಕಾರವು ಪರಿಶೋಧಿತ ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧಕರ ವರದಿಯನ್ನು ನಿಯಮಿಸಿದ ನಮೂನೆಯಲ್ಲಿ ಪ್ರಕಟಿಸತಕ್ಕದ್ದು. ಪ್ರಾಧಿಕಾರವು ಅಂಥ ಪರಿಶೋಧಿತ ಲೆಕ್ಕಪತ್ರಗಳ ಪ್ರತಿಗಳನ್ನು ಮತ್ತು ಲೆಕ್ಕಪರಿಶೋಧಕರ ವರದಿಯ ಪ್ರತಿಯನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು. ರಾಜ್ಯ ಸರ್ಕಾರವು ಪರಿಶೋಧಿತ ಲೆಕ್ಕಪತ್ರಗಳನ್ನು ಹಾಗೂ ಲೆಕ್ಕ ಪರಿಶೋಧಕರ ವರದಿಯನ್ನು ಸ್ವೀಕರಿಸಿದ ಮೇಲೆ ಆದಷ್ಟು ಬೇಗನೆ ಅವನ್ನು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.**"**

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ವಿಧಾನ ಸಭೆಯ ಮುಂದಿಡಬೇಕಾದ ಕಾಗದ ಪತ್ರಗಳ ಸಮಿತಿಯ ಶಿಫಾರಸ್ಸಿನ ಮೇರೆಗೆ ಪ್ರಾಧಿಕಾರದ ಪರಿಶೋಧಿತ ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧಕರ ವರದಿಯನ್ನು ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸುವುದಕ್ಕೆ ಉಪಬಂಧ ಕಲ್ಪಿಸಲು ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 1985ರ (1985ರ ಕರ್ನಾಟಕ ಅಧಿನಿಯಮ 39) 16ನೇ ಪ್ರಕರಣವನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದ ಯಾವುದೇ ಹೆಚ್ಚಿನ ವೆಚ್ಚವು ಉಂಟಾಗುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರಕ್ಕೆ ಸಂಬಂಧಿಸಿದ ಜ್ಞಾಪನ ಪತ್ರ**

**ಖಂಡ 2:** ಪರಿಶೋಧಿತ ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧಕರ ವರದಿಯನ್ನು ಪ್ರಕಟಿಸಬೇಕಾದ ರೀತಿಯ ಬಗ್ಗೆ ನಿಯಮಗಳನ್ನು ರಚಿಸುವುದಕ್ಕೆ ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಬಿ. ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**ಅನುಬಂಧ**

**ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ , 1985ರ**
**(1985ರ ಕರ್ನಾಟಕ ಅಧಿನಿಯಮ 39) ಉದ್ಧೃತ ಭಾಗ**

xx xx xx

**16. ಲೆಕ್ಕ ಮತ್ತು ಲೆಕ್ಕ ಪರಿಶೋಧನೆ.–** (1) xx xx xx

(3) ಪ್ರಾಧಿಕಾರದ ಲೆಕ್ಕಗಳ ಲೆಕ್ಕಪರಿಶೋಧನೆಯಾದ ಕೂಡಲೇ, ಪ್ರಾಧಿಕಾರವು, ಅದರ ಒಂದು ಪ್ರತಿಯನ್ನು ಅದರ ಮೇಲಣ ಲೆಕ್ಕಪರಿಶೋಧಕರ ವರದಿಯ ಒಂದು ಪ್ರತಿಯೊಂದಿಗೆ ರಾಜ್ಯಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ಲೆಕ್ಕಗಳನ್ನು ನಿಯಮಿಸಲಾದ ರೀತಿಯಲ್ಲಿ ಪ್ರಕಟಿಸುವಂತೆ ಮಾಡತಕ್ಕದ್ದು ಮತ್ತು ಅದರ ಪ್ರತಿಗಳನ್ನು ಯೋಗ್ಯ ಬೆಲೆಯಲ್ಲಿ ಮಾರಾಟಕ್ಕಾಗಿ ಇಡತಕ್ಕದ್ದು.

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**
**SECOND SESSION**

**THE BANGALORE METROPOLITAN REGION DEVELOPMENT AUTHORITY (AMENDMENT) BILL, 2009**
**(L.A. Bill No. 1 of 2009)**

A Bill further to amend the Bangalore Metropolitan Region Development Authority Act, 1985.

Whereas, it is expedient further to amend the Bangalore Metropolitan Region Development Authority Act, 1985 (Karnataka Act 39 of 1985), for the purposes hereinafter appearing;

Be it enacted by the Karnataka State Legislature in the fifty-ninth year of the Republic of India as follows:-

**1. Short title and commencement.-** (1) This Act may be called the Bangalore Metropolitan Region Development Authority (Amendment) Act, 2009.

(2) It shall come into force at once.

**2. Amendment of section 16.-** In section 16 of the Bangalore Metropolitan Region Development Authority Act, 1985 (Karnataka Act 39 of 1985), for sub-section (3), the following shall be substituted, namely:-

"(3) The Audited accounts and report of the Auditor shall be published by the authority in the prescribed manner. The Authority shall send a copy of such audited accounts and the report of the Auditor to the State Government. The State Government shall cause the audited accounts and the report of the Auditor to be laid before both Houses of the State Legislature as soon as, after it is received by the State Government."

**STATEMENT OF OBJECTS AND REASONS**

On the recommendation of the Legislative Committee on papers to be laid on the floor of the House, it is considered necessary to amend section 16 of the Bangalore Metropolitan Region Development Authority Act, 1985 (Karnataka Act 39 of 1985) to provide for placing of Audited Accounts and the report of the Auditor of the Authority before both the Houses of State Legislature.

Hence the Bill.

**FINANCIAL MEMORANDUM**

There is no extra expenditure involved in the proposed legislative measure.

**MEMORANDUM REGARDING DELEGATED LEGISLATION**

**Clause 2:** Empowers the State Government to make rules regarding the manner of publication of Audited Accounts and report of the Auditor.

The Proposed delegation of legislative power is normal in character.

**B.S. YEDDYURAPPA**
CHIEF MINISTER

**S.B. PATIL**
Secretary
Karnataka Legislative Assembly

**ANNEXURE**

Extract of the Bangalore Metropolitan Region Development Authority Act, 1985 (Karnataka Act 39 of 1985):-

xx xx xx

**16. Accounts and audit.-** (1) xx xx

(3) As soon as the accounts of the Authority have been audited, the Authority shall send a copy thereof together with a copy of the report of the auditor thereon to the State Government and shall cause the accounts to be published in the prescribed manner and place copies thereof for sale at a reasonable price.

xx xx xx

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಮಂಗಳವಾರ, ಜನವರಿ ೨೦, ೨೦೦೯ (ಪುಷ್ಯ ೩೦, ಶಕ ವರ್ಷ ೧೯೩೦) | ನಂ. ೨೬ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. LGA/BLA/2/2009, Bangalore, Camp: Belagavi, Dated : 20th January, 2009**

The following Bill was introduced in Legislative Assembly on 20.1.2009.

**THE KARNATAKA STATE CIVIL SERVICES (AMENDMENT) BILL, 2009**

**(L.A. Bill No. 2 of 2009)**

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಎರಡನೇ ಅಧಿವೇಶನ**

**ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ತಿದ್ದುಪಡಿ) ವಿಧೇಯಕ, 2009**

**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 02)**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ನ್ನು (1990ರ ಕರ್ನಾಟಕ ಅಧಿನಿಯಮ 14) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಐವತ್ತೊಂಭತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ :–** (1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ತಿದ್ದುಪಡಿ) ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ .–** ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 3ನೇ ಪ್ರಕರಣದ (2)ನೇ ಉಪ ಪ್ರಕರಣದಲ್ಲಿ, ಪರಂತುಕದ ತರವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ :–

"ಮತ್ತು ಪರಂತು, (ಎ) ಖಂಡದಲ್ಲಿರುವುದಾವುದು ಹುದ್ದೆಗಳ ಸಂಖ್ಯೆ ಮತ್ತು ಸ್ವರೂಪವನ್ನು ನಿರ್ದಿಷ್ಟಪಡಿಸುವ ನಿಯಮಗಳಿಗೆ ಅನ್ವಯಿಸತಕ್ಕದ್ದಲ್ಲ."

**3. 5ನೇ ಪ್ರಕರಣದ ತಿದ್ದುಪಡಿ .–** ಮೂಲ ಅಧಿನಿಯಮದ 5ನೇ ಪ್ರಕರಣದ (3)ನೇ ಉಪ ಪ್ರಕರಣದ ವಿವರಣೆಯಲ್ಲಿ "ಭ್ರಷ್ಟಾಚಾರ ಪ್ರತಿಬಂಧಕ ಅಧಿನಿಯಮ, 1947ರ (1947ರ ಕೇಂದ್ರ ಅಧಿನಿಯಮ 2) 5ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ" ಎಂಬ ಪದಗಳು, ಅಂಕಿಗಳು ಮತ್ತು ಆವರಣ ಚಿಹ್ನೆಗಳಿಗೆ "ಭ್ರಷ್ಟಾಚಾರ ಪ್ರತಿಬಂಧಕ ಅಧಿನಿಯಮ, 1988ರ (1988ರ ಕೇಂದ್ರ ಅಧಿನಿಯಮ 49) 13ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ" ಎಂಬ ಪದಗಳು, ಅಂಕಿಗಳು ಮತ್ತು ಆವರಣ ಚಿಹ್ನೆಗಳನ್ನು ಪ್ರತಿಯೋಜಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಸೃಜಿಸಿದ ಹುದ್ದೆಗಳ ಸಂಖ್ಯೆ ಮತ್ತು ಸ್ವರೂಪವನ್ನು ಮಾತ್ರ ನಿರ್ದಿಷ್ಟಪಡಿಸಿ ನಿಯಮಗಳ ಪೂರ್ವ ಪ್ರಕಟಣೆ ಮಾಡಬೇಕಾದ ಅಗತ್ಯತೆಯನ್ನು ಬಿಟ್ಟುಬಿಡಲು ಹಾಗೂ 5ನೇ ಪ್ರಕರಣದ (3)ನೇ ಉಪ ಪ್ರಕರಣದ ಅಡಿಯಲ್ಲಿಯ ವಿವರಣೆಯಲ್ಲಿರುವ ಭ್ರಷ್ಟಾಚಾರ ಪ್ರತಿಬಂಧಕ ಅಧಿನಿಯಮ, 1947ನ್ನು ಕುರಿತ ಉಲ್ಲೇಖಕ್ಕೆ ಬದಲಾಗಿ ಹಳೆಯ ಅಧಿನಿಯಮವನ್ನು ನಿರಸನಗೊಳಿಸಿದ ಭ್ರಷ್ಟಾಚಾರ ಪ್ರತಿಬಂಧಕ ಅಧಿನಿಯಮ, 1988ರ (1988ರ ಕೇಂದ್ರ ಅಧಿನಿಯಮ 49) ಉಲ್ಲೇಖವನ್ನು ಹಾಕಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ಆರ್ಥಿಕ ಹೊರೆಯನ್ನು ಒಳಗೊಂಡಿರುವುದಿಲ್ಲ.

**ಬಿ. ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ.

**ಅನುಬಂಧ**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) ಉದ್ಧೃತ ಭಾಗ

XX XX XX XX XX

5. **ಶಿಸ್ತು ವ್ಯವಹರಣೆಗಳಿಗೆ ಸಂಬಂಧಿಸಿದ ಉಪಬಂಧಗಳು .–** (1) XX XX

(3) ಸಾರ್ವಜನಿಕ ಸೇವೆಗಳಲ್ಲಿರುವ ಸದಸ್ಯರ ವಿರುದ್ಧದ ಇರುವ ದುರ್ನಡತೆ ಅಥವಾ ಭ್ರಷ್ಟಾಚಾರಕ್ಕೆ ಸಂಬಂಧಿಸಿದಂತೆ ಯಾವುದೇ ಶಿಸ್ತು ವ್ಯವಹರಣೆಗಳಲ್ಲಿ ಅಂಥ ಸದಸ್ಯ ಅಥವಾ ಯಾವೊಬ್ಬ ವ್ಯಕ್ತಿಯು ತನ್ನ ಆದಾಯಕ್ಕೆ ಮೀರಿದ ಸ್ವತ್ತನ್ನು ತನ್ನ ಪರವಾಗಿ ಹೊಂದಿದ್ದಾನೆಂದು ಅಥವಾ ಅಂಥ ಸದಸ್ಯನು ಕಛೇರಿಯ ಪದಾವಧಿಯ ಯಾವುದೇ ಸಮಯದಲ್ಲಿ ಹೊಂದಿದ್ದಾನೆಂದು ಮತ್ತು ಇದಕ್ಕೆ ಸರಿಯಾದ ಲೆಕ್ಕವನ್ನು ತೋರಿಸಲು ಸಾಧ್ಯವಿಲ್ಲವೆಂದು ಅಥವಾ ಆರ್ಥಿಕ ಸಂಪನ್ಮೂಲಗಳನ್ನು ಹೊಂದಿದ್ದಾನೆಂದು ರುಜುವಾತಾದಲ್ಲಿ, ಶಿಸ್ತು ಪ್ರಾಧಿಕಾರವು ಮತ್ತು ವಿಚಾರಣಾ ಪ್ರಾಧಿಕಾರವು, ಯಾವುದಾದರೂ ಇದ್ದಲ್ಲಿ, ಇದಕ್ಕೆ ವಿರುದ್ಧವಾಗಿ ರುಜುವಾತು ಪಡಿಸದ ಹೊರತು ಅಂಥ ನೌಕರನು ಅಂಥ ದುರ್ನಡತೆಯ ತಪ್ಪಿತಸ್ಥನೆಂದು ಭಾವಿಸತಕ್ಕದ್ದು.

**ವಿವರಣೆ:** ಈ ಪ್ರಕರಣದ ಉದ್ದೇಶಕ್ಕಾಗಿ "ಭ್ರಷ್ಟಾಚಾರ" ಎಂಬ ಪದಾವಳಿಯು ಭ್ರಷ್ಟಾಚಾರ ಪ್ರತಿಬಂಧಕ ಅಧಿನಿಯಮ, 1947ರ (1947ರ ಕೇಂದ್ರ ಅಧಿನಿಯಮ 2) 5ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ "ಕಛೇರಿ ಕರ್ತವ್ಯಗಳನ್ನು ನಿರ್ವಹಿಸುವಾಗ ಕ್ರಿಮಿನಲ್ ದುರ್ನಡತೆ" ಅಥವಾ ಭಾರತೀಯ ದಂಡ ಪ್ರಕ್ರಿಯೆಯ 161 ಮತ್ತು 165ನೇ ಪ್ರಕರಣಗಳಲ್ಲಿ "ತನ್ನ ಅಧಿಕೃತ ಕರ್ತವ್ಯಗಳ ಸಂಬಂಧದಲ್ಲಿ ಪಡೆಯಬಹುದಾದ ಕಾನೂನು ಸಮ್ಮತ ಸಂಭಾವನೆಯನ್ನು ಹೊರತುಪಡಿಸಿ ಲಂಚವನ್ನು ತೆಗೆದುಕೊಳ್ಳುವುದು" ಮತ್ತು "ಪ್ರತಿಫಲಾಪೇಕ್ಷೆ ಇಲ್ಲದೆ ಮೌಲಿಕ ವಸ್ತುಗಳನ್ನು ಪಡೆಯುವುದು" ಎಂಬ ಪದಾವಳಿಗೆ ಗೊತ್ತುಪಡಿಸಿದ ಅರ್ಥವನ್ನು ಹೊಂದಿರತಕ್ಕದ್ದು.

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**SECOND SESSION**

**THE KARNATAKA STATE CIVIL SERVICES (AMENDMENT) BILL, 2009**

**(L.A. Bill No. 2 of 2009)**

A Bill further to amend the Karnataka State Civil Services Act, 1978.

Whereas, it is expedient further to amend the Karnataka State Civil Services Act, 1978 (Karnataka Act 14 of 1990) for the purposes hereinafter appearing;

Be it enacted by the Karnataka State Legislature in the fifty-ninth year of the Republic of India as follows:-

**1. Short title and commencement.-** (1) This Act may be called the Karnataka State Civil Services (Amendment) Act, 2009.

(2) It shall come into force at once.

**2. Amendment of section 3.-** In section 3 of the Karnataka State Civil Services Act, 1978 (Karnataka Act 14 of 1990), (hereinafter referred to as the principal Act), in sub-section (2), after the proviso, the following shall be inserted, namely:-

"Provided further that nothing in clause (a) shall apply to rules specifying the number and nature of the posts."

**3. Amendment of section 5.-** In section 5 of the principal Act, in sub-section (3), in the Explanation, for the words, figures and brackets "in sub-section (1) of section 5 of the Prevention of Corruption Act, 1947 (Central Act 2 of 1947)", the words, figures and brackets "in sub-section (1) of section 13 of the Prevention of Corruption Act, 1988 (Central Act No. 49 of 1988)" shall be substituted.

**STATEMENT OF OBJECTS AND REASONS**

It is considered necessary to amend the Karnataka State Civil Services Act, 1978, to dispense with the requirement of previous publication of rules specifying only the number and nature of the posts created; and to replace the reference to the Prevention of Corruption Act, 1947, in the explanation below sub-section (3) of section 5, with that of the Prevention of Corruption Act, 1988 (Central Act No. 49 of 1988) which repealed the old Act.

Hence the Bill.

**FINANCIAL MEMORANDUM**

There is no extra financial expenditure involved in the proposed legislative measure.

**B.S. YEDDYURAPPA**
CHIEF MINISTER

**S.B. PATIL**
Secretary
Karnataka Legislative Assembly

**ANNEXURE**

Extract from the Karnataka State Civil Services Act, 1978 (Karnataka Act 14 of 1990)

xx xx xx xx

**5. Provisions relating to disciplinary proceedings.-**

xx xx xx xx

(3) If in any disciplinary proceeding against a member of the public services for misconduct or corruption it is proved that such member or any person on his behalf is in possession, or has, at any time during the period of office of such member, been in possession, for which such member cannot satisfactorily account, of pecuniary resources or property disproportionate to his known sources of income then on such proof, the disciplinary authority and the inquiring authority, if any, shall presume, unless the contrary is proved, that such servant is guilty of such misconduct.

**Explanation.-** For the purpose of this sub-section the expression "corruption" shall have the meaning assigned to the expression "Criminal misconduct in discharge of official duty" in sub-section (1) of section 5 of the Prevention of Corruption Act, 1947 (Central Act 2 of 1947) or the meaning assigned to the expressions "taking gratification other than legal remuneration in respect of an official act" and "obtaining valuable thing without consideration" in sections 161 and 165 respectively of the Indian Penal Code.

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜನವರಿ ೨೦, ೨೦೦೯ (ಪುಷ್ಯ ೩೦, ಶಕ ವರ್ಷ ೧೯೩೦) | ನಂ. ೨೨ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. LGA/BLA/4/2009, Bangalore, Camp: Belagavi, Dated : 20th January, 2009**

The following Bill was introduced in Legislative Assembly on 20.1.2009.

**THE KARNATAKA DEVADASIS (PROHIBITION OF DEDICATION) (AMENDMENT) BILL, 2009**

**(L.A. Bill No. 4 of 2009)**

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಎರಡನೇ ಅಧಿವೇಶನ**

**ಕರ್ನಾಟಕ ದೇವದಾಸಿಯರ (ಸಮರ್ಪಣಾ ನಿಷೇಧ) (ತಿದ್ದುಪಡಿ) ವಿಧೇಯಕ, 2009**

**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 4)**

ಕರ್ನಾಟಕ ದೇವದಾಸಿಯರ (ಸಮರ್ಪಣಾ ನಿಷೇಧ) ಅಧಿನಿಯಮ, 1982ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ದೇವದಾಸಿಯರ (ಸಮರ್ಪಣಾ ನಿಷೇಧ) ಅಧಿನಿಯಮ, 1982ನ್ನು (1984ರ ಕರ್ನಾಟಕ ಅಧಿನಿಯಮ ಸಂಖ್ಯೆ 1) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಐವತ್ತೊಂಬತ್ತನೆ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ ;

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ:–** (1) ಈ ಅಧಿನಿಯಮವನ್ನು ಕರ್ನಾಟಕ ದೇವದಾಸಿಯರ (ಸಮರ್ಪಣಾ ನಿಷೇಧ) (ತಿದ್ದುಪಡಿ) ಅಧಿನಿಯಮ, 2009 ಎಂದು ಕರೆಯತಕ್ಕದ್ದು.

**(2)** ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 3ಎ, 3ಬಿ, 3ಸಿ, 3ಡಿ ಮತ್ತು 3ಇ ಹೊಸ ಪ್ರಕರಣಗಳ ಸೇರ್ಪಡೆ.–** ಕರ್ನಾಟಕ ದೇವದಾಸಿಯರ (ಸಮರ್ಪಣಾ ನಿಷೇಧ) ಅಧಿನಿಯಮ, 1982ರ (1984ರ ಕರ್ನಾಟಕ ಅಧಿನಿಯಮ ಸಂಖ್ಯೆ 1) 3ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ :–

"**3ಎ. ಸಮರ್ಪಣಾ ನಿಷೇಧಕ ನಿರ್ಬಂಧಕಾಜ್ಞೆಯನ್ನು ಹೊರಡಿಸಲು ಜಿಲ್ಲಾ ಮ್ಯಾಜಿಸ್ಟ್ರೇಟನಿಗೆ ಅಥವಾ ಕಾರ್ಯಕಾರಿ ಮ್ಯಾಜಿಸ್ಟ್ರೇಟನಿಗೆ ಇರುವ ಅಧಿಕಾರ.–** (1) ಈ ಅಧಿನಿಯಮದಲ್ಲಿ ಅದಕ್ಕೆ ವಿರುದ್ಧವಾಗಿ ಏನೇ ಇದ್ದರೂ, ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಯ ಅರ್ಜಿಯ ಮೂಲಕ ಅಥವಾ ಯಾವುದೇ ವ್ಯಕ್ತಿಯ ದೂರಿನ ಮೂಲಕ ಅಥವಾ ಅನ್ಯಥಾ ಮಾಹಿತಿಯನ್ನು ಪಡೆದ ಮೇಲೆ ಜಿಲ್ಲಾ ಮ್ಯಾಜಿಸ್ಟ್ರೇಟನು ಅಥವಾ ಕಾರ್ಯಕಾರಿ ಮ್ಯಾಜಿಸ್ಟ್ರೇಟನು, ಅಧಿನಿಯಮವನ್ನು ಉಲ್ಲಂಘಿಸಿ ಸಮರ್ಪಣೆಯನ್ನು ವ್ಯವಸ್ಥೆ ಮಾಡಲಾಗಿದೆ ಅಥವಾ ಅದನ್ನು ಇನ್ನೇನು ವಿಧ್ಯುಕ್ತಗೊಳಿಸಲಿದ್ದಾರೆ ಎಂದು ಮನಗಂಡರೆ ಅಂಥ ಮ್ಯಾಜಿಸ್ಟ್ರೇಟನು ಒಂದು ಸಂಸ್ಥೆಯ ಅಥವಾ ವ್ಯಕ್ತಿಗಳ ಸಂಘದ ಒಬ್ಬ ಸದಸ್ಯನೂ ಸೇರಿದಂತೆ ಯಾವನೇ ವ್ಯಕ್ತಿಯ ವಿರುದ್ಧ ಅಂಥ ಸಮರ್ಪಣೆಯನ್ನು ನಿಷೇಧಿಸಿ ಅಥವಾ ನಿಗ್ರಹಿಸಿ ಒಂದು ನಿಷೇಧಕ ನಿರ್ಬಂಧಕಾಜ್ಞೆಯನ್ನು ಹೊರಡಿಸತಕ್ಕದ್ದು.

(2) ಅಂಥ ಸಮರ್ಪಣೆಯು ನಡೆಯಬಹುದಾದ ಸಂಭಾವ್ಯತೆಯ ಬಗ್ಗೆ ವೈಯಕ್ತಿಕ ತಿಳುವಳಿಕೆಯನ್ನು ಹೊಂದಿರುವ ಅಥವಾ ನಂಬಲು ಕಾರಣಗಳಿರುವ ಯಾವೊಬ್ಬ ವ್ಯಕ್ತಿಯೂ ಮತ್ತು ಸಾಕಷ್ಟು ಮಾಹಿತಿಯನ್ನು ಹೊಂದಿರುವ ಒಂದು ಸರ್ಕಾರೇತರ ಸಂಸ್ಥೆಯು (1)ನೇ ಉಪ–ಪ್ರಕರಣದ ಅಡಿಯಲ್ಲಿ ಒಂದು ಅರ್ಜಿಯನ್ನು ಅಥವಾ ಒಂದು ದೂರನ್ನು ನೀಡಬಹುದು.

(3) ಸಂದರ್ಭಾನುಸಾರ ಯಾವುದೇ ನಂಬಲರ್ಹವಾದ ವರದಿ ಅಥವಾ ಮಾಹಿತಿ ಅಥವಾ ದೂರಿನ ಆಧಾರದ ಮೇಲೆ ಸಹ ಜಿಲ್ಲಾ ಮ್ಯಾಜಿಸ್ಟ್ರೇಟನು ಅಥವಾ ಕಾರ್ಯಕಾರಿ ಮ್ಯಾಜಿಸ್ಟ್ರೇಟನು ಸ್ವಪ್ರೇರಣೆಯಿಂದ ಸಂಜ್ಞಾನಕ್ಕೆ ತೆಗೆದುಕೊಳ್ಳಬಹುದು.

(4) ಜಾತ್ರೆಗಳಲ್ಲಿ ಹುಣ್ಣಿಮೆಯಂಥ ಕೆಲವು ದಿನಗಳಲ್ಲಿ ಮಹಿಳೆಯರನ್ನು ದೇವದಾಸಿಯಾರಾಗಿ ಸಾಮೂಹಿಕವಾಗಿ ಸಮರ್ಪಣೆ ಮಾಡುವುದನ್ನು ತಡೆಗಟ್ಟುವ ಉದ್ದೇಶಕ್ಕಾಗಿ, ಸಂಬಂಧಪಟ್ಟ ಜಿಲ್ಲಾ ಮ್ಯಾಜಿಸ್ಟ್ರೇಟನನ್ನು ಈ ಅಧಿನಿಯಮದ ಮೂಲಕ ಅಥವಾ ಅದರಡಿಯಲ್ಲಿ, ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಗೆ ಪ್ರದಾನ ಮಾಡಲಾದ ಎಲ್ಲಾ ಅಧಿಕಾರಗಳನ್ನುಳ್ಳ, ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಯೆಂದು ಭಾವಿಸತಕ್ಕದ್ದು.

(5) ಜಿಲ್ಲಾ ಮ್ಯಾಜಿಸ್ಟ್ರೇಟನು, ಸಮರ್ಪಣೆಯನ್ನು ನಿಲ್ಲಿಸುವುದಕ್ಕೆ ಅಥವಾ ತಪ್ಪಿಸುವುದಕ್ಕೆ ಹೆಚ್ಚಿನ ಅಧಿಕಾರವನ್ನು ಸಹ ಹೊಂದಿರತಕ್ಕದ್ದು ಮತ್ತು ಈ ಉದ್ದೇಶಕ್ಕಾಗಿ, ಆತನು ಅಗತ್ಯವಾಗಬಹುದಾದ ಕನಿಷ್ಠ ಬಲಪ್ರಯೋಗವನ್ನು ಮಾಡುವುದೂ ಒಳಗೊಂಡಂತೆ ಎಲ್ಲಾ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಬಹುದು.

(6) (1)ನೇ ಉಪಪ್ರಕರಣದಡಿಯಲ್ಲಿ ಯಾವುದೇ ವ್ಯಕ್ತಿಯ ಅಥವಾ ಯಾವುದೇ ಸಂಸ್ಥೆಯ ಅಥವಾ ವ್ಯಕ್ತಿಗಳ ಸಂಘದ ಸದಸ್ಯನ ವಿರುದ್ಧ ಯಾವುದೇ ನಿಷೇಧಕ ನಿರ್ಬಂಧಕಾಜ್ಞೆಯನ್ನು ಸಂಬಂಧಪಟ್ಟ ಮ್ಯಾಜಿಸ್ಟ್ರೇಟನು ಅಂಥ ವ್ಯಕ್ತಿ, ಸಂಸ್ಥೆಯ ಅಥವಾ ಸಂಘದ ಸದಸ್ಯರುಗಳಿಗೆ ಮುಂಚಿತವಾಗಿ ನೋಟೀಸನ್ನು ನೀಡಿದ್ದ ಹೊರತು ಮತ್ತು ನಿರ್ಬಂಧಕಾಜ್ಞೆಯನ್ನು ಏಕೆ ಹೊರಡಿಸಬಾರದು ಎಂಬ ಬಗ್ಗೆ ಕಾರಣ ತೋರಿಸುವ ಅವಕಾಶವನ್ನು ಆತನಿಗೆ ಅಥವಾ ಅವರಿಗೆ ನೀಡಿದ್ದ ಹೊರತು ಹೊರಡಿಸತಕ್ಕದ್ದಲ್ಲ ;

ಪರಂತು, ಯಾವುದೇ ತುರ್ತು ಸಂದರ್ಭದಲ್ಲಿ, ಸಂಬಂಧಪಟ್ಟ ಮ್ಯಾಜಿಸ್ಟ್ರೇಟನು ಈ ಉಪ ಪ್ರಕರಣದಡಿ ಯಾವುದೇ ನೋಟೀಸನ್ನು ನೀಡದೆ ಒಂದು ಮಧ್ಯಂತರ ನಿರ್ಬಂಧಕಾಜ್ಞೆಯನ್ನು ಹೊರಡಿಸುವ ಅಧಿಕಾರವನ್ನು ಹೊಂದಿರತಕ್ಕದ್ದು.

(7) ಯಾವ ಪಕ್ಷಕಾರನ ವಿರುದ್ಧ ನಿರ್ಬಂಧಕಾಜ್ಞೆಯನ್ನು ಹೊರಡಿಸಲಾಗಿದೆಯೋ ಆತನಿಗೆ ನೋಟಿಸನ್ನು ನೀಡಿದ ತರುವಾಯ ಮತ್ತು ಆತನ ಹೇಳಿಕೆಯನ್ನು ಪಡೆದ ಮೇಲೆ (1)ನೇ ಉಪಪ್ರಕರಣದಡಿಯಲ್ಲಿ ಹೊರಡಿಸಿದ ನಿರ್ಬಂಧಕಾಜ್ಞೆಯನ್ನು ಸ್ಥಿರೀಕರಿಸಬಹುದು ಅಥವಾ ತೆರವುಗೊಳಿಸಬಹುದು.

(8) ಜಿಲ್ಲಾ ಮ್ಯಾಜಿಸ್ಟ್ರೇಟನು ಅಥವಾ ಕಾರ್ಯಕಾರಿ ಮ್ಯಾಜಿಸ್ಟ್ರೇಟನು ತಾನಾಗಿಯೇ ಆಗಲಿ ಅಥವಾ ಯಾವುದೇ ಬಾಧಿತ ವ್ಯಕ್ತಿಯ ಅರ್ಜಿಯ ಮೇಲಾಗಲಿ (1)ನೇ ಉಪಪ್ರಕರಣದಡಿಯಲ್ಲಿ ಹೊರಡಿಸಲಾದ ನಿರ್ಬಂಧಕಾಜ್ಞೆಯನ್ನು ರದ್ದುಗೊಳಿಸಬಹುದು ಅಥವಾ ಮಾರ್ಪಡಿಸಬಹುದು.

(9) (1)ನೇ ಉಪಪ್ರಕರಣದಡಿಯಲ್ಲಿ ಒಂದು ಅರ್ಜಿಯು ಸ್ವೀಕರಿಸಿದ ಮೇಲೆ ಜಿಲ್ಲಾ ಮ್ಯಾಜಿಸ್ಟ್ರೇಟನು ಅಥವಾ ಕಾರ್ಯಕಾರಿ ಮ್ಯಾಜಿಸ್ಟ್ರೇಟನು ಅರ್ಜಿದಾರನಿಗೆ ಖುದ್ದಾಗಿ ಅಥವಾ ತನ್ನ ನ್ಯಾಯವಾದಿಯ ಮೂಲಕ ತನ್ನ ಮುಂದೆ ಹಾಜರಾಗಲು ಅವಕಾಶವನ್ನು ನೀಡತಕ್ಕದ್ದು. ಅರ್ಜಿದಾರನ ಅಹವಾಲನ್ನು ಕೇಳಿದ ತರುವಾಯ, ಜಿಲ್ಲಾ ಮ್ಯಾಜಿಸ್ಟ್ರೇಟನು ಅಥವಾ ಕಾರ್ಯಕಾರಿ ಮ್ಯಾಜಿಸ್ಟ್ರೇಟನು ಅರ್ಜಿಯನ್ನು ಪೂರ್ಣವಾಗಿ ಅಥವಾ ಭಾಗಶಃ ತಿರಸ್ಕರಿಸಬಹುದು ಮತ್ತು ಹಾಗೆ ಮಾಡಿದ್ದಕ್ಕೆ ತನ್ನ ಕಾರಣಗಳನ್ನು ಲಿಖಿತದಲ್ಲಿ ದಾಖಲಿಸತಕ್ಕದ್ದು.

(10) (1)ನೇ ಉಪಪ್ರಕರಣದಡಿಯಲ್ಲಿ ತನ್ನ ವಿರುದ್ಧ ನಿರ್ಬಂಧಕಾಜ್ಞೆಯನ್ನು ಹೊರಡಿಸಲಾಗಿದೆ ಎಂದು ಗೊತ್ತಿರುವ ಯಾವೊಬ್ಬ ವ್ಯಕ್ತಿಯು, ಅಂಥ ನಿರ್ಬಂಧಕಾಜ್ಞೆಯನ್ನು ಉಲ್ಲಂಘಿಸಿದರೆ, ಆತನು ಮೂರು ವರ್ಷಗಳ ಅವಧಿಯವರೆಗೆ ವಿಸ್ತರಿಸಬಹುದಾದ ಆದರೆ ಎರಡು ವರ್ಷಗಳಿಗಿಂತ ಕಡಿಮೆಯಲ್ಲದ ಅವಧಿಯವರೆಗೆ ಎರಡರಲ್ಲೊಂದು ಬಗೆಯ ಕಾರಾವಾಸದಿಂದ ಅಥವಾ ಎರಡು ಸಾವಿರ ರೂಪಾಯಿಗಳಿಗೆ ಕಡಿಮೆಯಲ್ಲದ ಮತ್ತು ಹತ್ತು ಸಾವಿರ ರೂಪಾಯಿಗಳಿಗೆ ವಿಸ್ತರಿಸಬಹುದಾದ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

3ಬಿ. **ಮಹಿಳೆಯ ಕಾಪಾಡುವಿಕೆ, ಆರೈಕೆ, ಸಂರಕ್ಷಣೆ, ಕ್ಷೇಮಾಭಿವೃದ್ಧಿ ಮತ್ತು ಪುನರ್ವಸತಿ.–** ರಾಜ್ಯ ಸರ್ಕಾರವು, 'ದೇವದಾಸಿ ಪುನರ್ವಸತಿ ಯೋಜನೆ'ಯ ಅಡಿಯಲ್ಲಿ ಸಲಹೆ ನೀಡುವುದು ಮತ್ತು ಜಾಗೃತಿ ಮೂಡಿಸುವುದರ ಮೂಲಕ ಸಮರ್ಪಣೆಯಾಗುವುದರಿಂದ ಕಾಪಾಡಿದಂತಹ ಮಹಿಳೆಯ ಪುನರ್ವಸತಿಗೆ ಅವಶ್ಯಕವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಅವಶ್ಯವಿದ್ದಲ್ಲಿ ರಿಮಾಂಡ್ ಹೋಮ್‌ನಲ್ಲಿ ಆರು ತಿಂಗಳವರೆಗೆ ರಕ್ಷಣೆಯನ್ನು ನೀಡುವ ಅಥವಾ ಆಶ್ರಯವನ್ನು ನೀಡುವ ಮೂಲಕ ಆದಾಯಗಳಿಕೆ ಚಟುವಟಿಕೆಗಳಲ್ಲಿ ಸದರಿ ಮಹಿಳೆಯನ್ನು ತೊಡಗಿಸಿ ಆಕೆಯನ್ನು ಆರ್ಥಿಕವಾಗಿ ಸಬಲಗೊಳಿಸತಕ್ಕದ್ದು ಹಾಗೂ ಸದರಿ ಮಹಿಳೆಯು ಬ್ಯಾಂಕ್‌ಗಳಿಂದ ಸಹಾಯಧನ ಮತ್ತು ಸಾಲಗಳನ್ನು ಪಡೆದು ಸ್ವಾವಲಂಬಿಯಾಗುವಂತೆ ನೋಡಿಕೊಳ್ಳತಕ್ಕದ್ದು.

3ಸಿ. **ಅಪರಾಧಗಳು ಸಂಜ್ಞೇಯ ಮತ್ತು ಜಾಮೀನೀಯವಲ್ಲದ್ದು ಆಗಿರತಕ್ಕದ್ದು.–** ಈ ಅಧಿನಿಯಮದ ಅಡಿಯಲ್ಲಿ ದಂಡನೀಯವಾದ ಅಪರಾಧವು ಸಂಜ್ಞೇಯ ಮತ್ತು ಜಾಮೀನೀಯವಲ್ಲದ್ದಾಗಿರತಕ್ಕದ್ದು.

3ಡಿ. **ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಯ ನೇಮಕಾತಿ.–** (1) ರಾಜ್ಯ ಸರ್ಕಾರವು, ರಾಜ್ಯ ಪತ್ರದಲ್ಲಿ ಅಧಿಸೂಚಿಸುವ ಮೂಲಕ ಇಡೀ ರಾಜ್ಯಕ್ಕೆ ಅಥವಾ ಆ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಪ್ರದೇಶಕ್ಕೆ ಸದರಿ ನಿರ್ದಿಷ್ಟಪಡಿಸಿದ ಪ್ರದೇಶ ಅಥವಾ ಪ್ರದೇಶಗಳ ಮೇಲೆ ಅಧಿಕಾರ ವ್ಯಾಪ್ತಿಯುಳ್ಳ 'ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿ' ಎಂಬ ಅಧಿಕಾರಿ ಅಥವಾ ಅಧಿಕಾರಿಗಳನ್ನು ನೇಮಕ ಮಾಡತಕ್ಕದ್ದು.

(2) (1)ನೇ ಉಪ ಪ್ರಕರಣಕ್ಕೆ ಪ್ರತಿಕೂಲವಾಗದಂತೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸಂಬಂಧಪಟ್ಟ ಉಪ ನಿರ್ದೇಶಕರು, ಸಹಾಯಕ ನಿರ್ದೇಶಕರು ಅಥವಾ ಯೋಜನಾ ಅಧಿಕಾರಿಯು ತಮ್ಮ ತಮ್ಮ ಅಧಿಕಾರ ವ್ಯಾಪ್ತಿಯ ಪ್ರದೇಶದಲ್ಲಿ ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಗಳಾಗಿರತಕ್ಕದ್ದು.

(3) ರಾಜ್ಯ ಸರ್ಕಾರವು, ಸಮಾಜಸೇವೆಯಲ್ಲಿ ಒಳ್ಳೆಯ ಹೆಸರನ್ನು ಪಡೆದಿರುವ ಸಂಬಂಧಿಸಿದ ಸ್ಥಳೀಯ ಗೌರವಾನ್ವಿತ ಸದಸ್ಯ ಅಥವಾ ಗ್ರಾಮ ಪಂಚಾಯತಿ ಅಥವಾ ಮುನ್ಸಿಪಾಲಿಟಿಯ ಒಬ್ಬ ಅಧಿಕಾರಿ ಅಥವಾ ಸರ್ಕಾರಿ ಅಥವಾ ಯಾವುದೇ

ಸಾರ್ವಜನಿಕ ಉದ್ಯಮದ ಒಬ್ಬ ಅಧಿಕಾರಿ ಅಥವಾ ಯಾವುದೇ ಸರ್ಕಾರೇತರ ಸಂಸ್ಥೆಯ ಒಬ್ಬ ಪದಾಧಿಕಾರಿಯನ್ನು ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಗೆ ಸಹಾಯ ನೀಡುವಂತೆ ಕೋರಬಹುದು ಮತ್ತು ಸಂದರ್ಭಾನುಸಾರ ಅಂಥ ಸದಸ್ಯ, ಅಧಿಕಾರಿ ಅಥವಾ ಸಿಬ್ಬಂದಿಯು ಆ ರೀತಿ ವರ್ತಿಸಲು ಬದ್ಧನಾಗಿರತಕ್ಕದ್ದು.

(4) ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಯ ಕರ್ತವ್ಯಗಳು ಈ ಮುಂದಿನಂತಿರತಕ್ಕದ್ದು,-

(ಎ) 3ಎ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ ಮತ್ತು ತಾನು ಸೂಕ್ತವೆಂದು ಭಾವಿಸುವಂಥ ಕ್ರಮವನ್ನು ಕೈಗೊಂಡು ದೇವದಾಸಿ ಸಮರ್ಪಣೆಯನ್ನು ನಿಷೇಧಿಸುವುದು ;

(ಬಿ) ಅಧಿನಿಯಮದ ಉಪಬಂಧಗಳನ್ನು ಉಲ್ಲಂಘಿಸುವ ವ್ಯಕ್ತಿಗಳ ವಿರುದ್ಧ ಪರಿಣಾಮಕಾರಿಯಾಗಿ ಅಭಿಯೋಜನೆ ಮಾಡುವುದಕ್ಕಾಗಿ ಸಾಕ್ಷ್ಯಗಳನ್ನು ಸಂಗ್ರಹಿಸುವುದು ;

(ಸಿ) ದೇವದಾಸಿ ಸಮರ್ಪಣೆಗೆ ಪ್ರೋತ್ಸಾಹಿಸಬೇಡಿ, ಸಹಾಯ ನೀಡಬೇಡಿ, ನೆರವು ನೀಡಬೇಡಿ ಅಥವಾ ಅವಕಾಶ ನೀಡಬೇಡಿ ಎಂದು ವೈಯಕ್ತಿಕ ಪ್ರಕರಣಗಳಲ್ಲಿ ಬುದ್ಧಿವಾದ ಹೇಳುವುದು ಅಥವಾ ಆ ಪ್ರದೇಶದ ನಿವಾಸಿಗಳಿಗೆ ಸಲಹೆಗಳನ್ನು ನೀಡುವುದು ;

(ಡಿ) ಸಮರ್ಪಣೆಯಿಂದಾಗುವ ದುಷ್ಪರಿಣಾಮಗಳ ಬಗ್ಗೆ ಜಾಗೃತಿ ಉಂಟುಮಾಡುವುದು ;

(ಇ) ಸಮರ್ಪಣೆಯು ಎಷ್ಟು ಹೀನಾಯ ಎಂಬುದುದನ್ನು ಸಮುದಾಯಕ್ಕೆ ಮನಗಾಣಿಸುವುದು ;

(ಎಫ್) ಘಟನೆ ನಡೆದ ಸ್ಥಳದಲ್ಲಿಯೇ ಪಂಚನಾಮೆ ವರದಿಯನ್ನು ಬರೆಯಲು ಮತ್ತು ಸಾಕ್ಷಿಗಳ ಸಹಿಯನ್ನು ಪಡೆಯಲು ಕ್ರಮ ಕೈಗೊಳ್ಳುವುದು ;

(ಜಿ) ರಾಜ್ಯ ಸರ್ಕಾರವು ನಿರ್ದೇಶಿಸಬಹುದಾದಂಥ ನಿಯತಕಾಲಿಕ ವರದಿಯನ್ನು ಮತ್ತು ಅಂಕಿ ಅಂಶಗಳನ್ನು ಸಲ್ಲಿಸುವುದು, ಮತ್ತು

(ಎಚ್) ರಾಜ್ಯ ಸರ್ಕಾರವು ತನಗೆ ವಹಿಸಬಹುದಾದಂಥ ಪ್ರಕಾರ್ಯಗಳನ್ನು ನಿರ್ವಹಿಸುವುದು ಮತ್ತು ಅಂಥ ಕರ್ತವ್ಯಗಳನ್ನು ನೆರವೇರಿಸುವುದು.

(5) ರಾಜ್ಯ ಸರ್ಕಾರವು ರಾಜ್ಯ ಪತ್ರದಲ್ಲಿ ಅಧಿಸೂಚಿಸುವ ಮೂಲಕ ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಷರತ್ತುಗಳಿಗೆ ಮತ್ತು ಪರಿಮಿತಿಗಳಿಗೆ ಒಳಪಟ್ಟು ಪೋಲೀಸು ಅಧಿಕಾರಿಯ ಅಧಿಕಾರಗಳನ್ನು ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಯು ಚಲಾಯಿಸಲು ವಹಿಸಿಕೊಡಬಹುದು ಮತ್ತು ದೇವದಾಸಿ ಸಮರ್ಪಣೆ ನಿಷೇಧಕ ಅಧಿಕಾರಿಯು ಅದರಲ್ಲಿ ನಿರ್ದಿಷ್ಟಪಡಿಸಿದಂಥ ಷರತ್ತುಗಳಿಗೆ ಮತ್ತು ಪರಿಮಿತಿಗಳಿಗೆ ಒಳಪಟ್ಟು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

(6) ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಯು ಕಾಪಾಡಲ್ಪಟ್ಟ ಮಹಿಳೆಯ ಪುನರ್ವಸತಿಗಾಗಿ 3ಬಿ ಪ್ರಕರಣದ ಅಡಿಯಲ್ಲಿ ನ್ಯಾಯಾಲಯದ ಆದೇಶವನ್ನು ಕೋರಿ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಲು ಅಧಿಕಾರವನ್ನು ಹೊಂದಿರತಕ್ಕದ್ದು.

(7) ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಯು ತನ್ನ ಅಧಿಕಾರ ವ್ಯಾಪ್ತಿಯ ಪ್ರದೇಶದಲ್ಲಿ ಸಮರ್ಪಣೆಯ ಪ್ರಕರಣಗಳು ನಡೆದಾಗ ಅಥವಾ ನಡೆಯುವ ಸಂಭವವಿರುವಾಗ ಸದರಿ ವಿಷಯವನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರಿಗೆ ಹಾಗೂ ಸಂಬಂಧಿಸಿದ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ವರದಿಮಾಡತಕ್ಕದ್ದು.

3ಇ. **ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಯು ಸಾರ್ವಜನಿಕ ನೌಕರನಾಗಿರುವುದು.**- ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಯು ಭಾರತ ದಂಡ ಸಂಹಿತೆಯ (1860 ರ ಕೇಂದ್ರ ಅಧಿನಿಯಮ 45) 21ನೇ ಪ್ರಕರಣದ ಅರ್ಥ ವ್ಯಾಪ್ತಿಯಲ್ಲಿ ಸಾರ್ವಜನಿಕ ನೌಕರನಾಗಿರುವನೆಂದು ಭಾವಿಸತಕ್ಕದ್ದು."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

(1) ಹೆಣ್ಣು ಮಕ್ಕಳನ್ನು ದೇವದಾಸಿಯರಾಗಿ ಸಮರ್ಪಣೆ ಮಾಡಬಹುದಾದ ಸಂಭಾವ್ಯತೆಯನ್ನು ತಡೆಗಟ್ಟಲು ನಿರ್ಬಂಧಕಾಜ್ಞೆಯನ್ನು ಹೊರಡಿಸುವ ಅಧಿಕಾರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟರಿಗೆ ಅಥವಾ ಕಾರ್ಯಕಾರಿ ಮ್ಯಾಜಿಸ್ಟ್ರೇಟನಿಗೆ ನೀಡುವುದಕ್ಕಾಗಿ,

(2) ದೇವದಾಸಿಯರಾಗಿ ಸಮರ್ಪಣೆಯಿಂದ ಮಹಿಳೆಯನ್ನು ಕಾಪಾಡುವುದು, ಆರೈಕೆ, ಸಂರಕ್ಷಣೆ, ಕ್ಷೇಮಾಭಿವೃದ್ಧಿ ಮತ್ತು ಅವರಿಗೆ ಪುನರ್ವಸತಿ ಕಲ್ಪಿಸುವುದಕ್ಕಾಗಿ,

(3) ಈ ಅಧಿನಿಯಮದಡಿಯಲ್ಲಿನ ಅಪರಾಧಗಳು ಸಂಜ್ಞೇಯ ಮತ್ತು ಜಾಮೀನೀಯವಲ್ಲದ್ದು ಎಂದು ಉಪಬಂಧಿಸುವುದಕ್ಕಾಗಿ,

(4) ದೇವದಾಸಿಯ ಸಮರ್ಪಣೆ ನಿಷೇಧ ಅಧಿಕಾರಿಯನ್ನು ಅಂಥ ಸಮರ್ಪಣೆಯನ್ನು ತಡೆಗಟ್ಟುವ ಅಧಿಕಾರಗಳೊಂದಿಗೆ ನೇಮಿಸಲು ಉಪಬಂಧ ಕಲ್ಪಿಸುವುದಕ್ಕಾಗಿ,–

– ಕರ್ನಾಟಕ ದೇವದಾಸಿಯರ (ಸಮರ್ಪಣಾ ನಿಷೇಧ) ಅಧಿನಿಯಮ, 1982ನ್ನು ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮದಿಂದಾಗಿ ಯಾವುದೇ ಹೆಚ್ಚಿನ ಆರ್ಥಿಕ ಹೊರೆ ಉಂಟಾಗುವುದಿಲ್ಲ.

**ಪಿ.ಎಂ. ನರೇಂದ್ರ ಸ್ವಾಮಿ**
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರು.

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ.

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**SECOND SESSION**

**THE KARNATAKA DEVADASIS (PROHIBITION OF DEDICATION) (AMENDMENT) BILL, 2009**

**(L.A. Bill No. 4 of 2009)**

A Bill further to amend the Karnataka Devadasis (Prohibition of Dedication) Act, 1982.

Whereas it is expedient further to amend the Karnataka Devadasis (Prohibition of Dedication) Act, 1982 (Karnataka Act No. 1 of 1984) for the purposes hereinafter appearing;

Be it enacted by the Karnataka State Legislature in the fifty-ninth year of the Republic of India, as follows:-

**1. Short title and commencement.-** (1) This Act may be called the Karnataka Devadasis (Prohibition of Dedication) (Amendment) Act, 2009.

(2) It shall come into force at once.

**2. Insertion of new sections 3A, 3B, 3C, 3D and 3E.-** After section 3 of the Karnataka Devadasis (Prohibition of Dedication) Act, 1982 (Karnataka Act No.1 of 1984), the following shall be inserted, namely:-

"**3A. Power of district magistrate or executive magistrate to issue injunction prohibiting dedication.-** (1) Notwithstanding anything to the contrary contained in this Act, if on an application of the Devadasi Prohibition Officer or on receipt of information through a complaint or otherwise from any person, a District Magistrate or an Executive Magistrate is satisfied that a dedication in contravention of this Act, has been arranged or is about to be solemnised, such Magistrate shall issue a prohibitory injunction against any person including a member of an organisation or an association of persons prohibiting or restraining from such dedication.

(2) An application or a complaint under sub-section (1), may be made by any person having personal knowledge or reason to believe and a non-governmental organisation having reasonable information, relating to the likelihood of taking place of such dedication.

(3) The District Magistrate or the Executive Magistrate may also take suo motu cognisance on the basis of any reliable report or information or complaint as the case may be.

(4) For the purpose of preventing en-mass dedication as Devadasis on certain days such as full moon day during Jathras, the concerned District Magistrate shall be deemed to be the Devadasi Dedication Prohibition Officer with all powers as are conferred on a Devadasi Dedication Prohibition Officer by or under this Act.

(5) The District Magistrate shall also have additional powers to stop or prevent dedication and for this purpose, he may take all appropriate measures including use of the minimum force required.

(6) No prohibitory injunction under sub-section (1) shall be issued against any person or member of any organisation or association of persons unless the magistrate concerned has previously given notice to such person, members of the organisation or association of persons, as the case may be, and has offered him or them an opportunity to show cause against the issue of the injunction:

Provided that in the case of any urgency, the magistrate concerned shall have the power to issue an interim injunction without giving any notice under this sub-section.

(7) An injunction issued under sub-section (1) may be confirmed or vacated after giving notice and hearing the party against whom the injunction was issued.

(8) The District Magistrate or the Executive Magistrate may either on its own motion or on the application of any person aggrieved, rescind or alter an injunction issued under sub-section (1).

(9) Where an application received under sub-section (1), the District Magistrate or the Executive Magistrate shall afford the applicant an opportunity of appearing before it either in person or by an advocate. After hearing the applicant, the District Magistrate or the Executive Magistrate rejects the application wholly or in part, he shall record in writing its reasons for so doing.

(10) Whoever knowing that an injunction has been issued under sub-section (1) against him disobeys such injunction shall be punishable with imprisonment of either description for a term which may extend to three years but which shall not be less than two years or with a fine which shall not be less than rupees two thousand but which may extend to rupees ten thousand or with both.

**3B. Rescue, care, protection, welfare and rehabilitation of woman.-** The State Government shall take all necessary steps to rehabilitate the woman rescued from dedication, under the "Devadasi Rehabilitation Programme" by providing counselling and awareness and shall be economically empowered by involving the said woman in income generating activities, if necessary by providing protection or shelter in remand home upto six months and see that the said woman shall become self-sustained by availing subsidy and loans through banks.

**3C. Offences to be cognizable and nonbailable.-** An offence punishable under this Act shall be cognisable and non-bailable.

**3D. Appointment of Devadasi Dedication Prohibition Officer.-** (1) The State Government may, by notification, in the official Gazette, appoint for whole state or such part thereof, as may be specified in that notification, an officer or officers to be known as Devadasi Dedication Prohibition Officer having jurisdiction over the area or areas specified in the notification.

(2) Without prejudice to sub-section (1), the concerned Deputy Director, Assistant Director, Women and Child Development Department or the Project Officer shall be the Devadasi Dedication Prohibition Officer in their respective jurisdiction.

(3) The State Government may also request a respectable member of the locality with a record of social service or an officer of the Gram Panchayath or Municipality or an officer of the Government or any public sector undertaking or an office bearer of any non-governmental organisation to assist the Devadasi Dedication Prohibition Officer and such member, officer or office bearer, as the case may be, shall be bound to act accordingly.

(4) It shall be the duty of the Devadasi Dedication Prohibition Officer,-

(a) to prevent dedication by making an application under sub-section (1) of section 3A and by taking such actions as he may deem fit;

(b) to collect evidences for the effective prosecution of persons contravening the provisions of the Act;

(c) to advise either individual cases or counsel the residents of the locality generally not to indulge in promoting, helping, aiding or allowing the dedication of devadasi;

(d) to create awareness of the evil which results from dedication;

(e) to sensitize the community on the issue of dedication;

(f) to take action to write the Panchanama report at the place of incident itself and obtain the signatures of witnesses;

(g) to furnish such periodical returns and statistics as the State Government may direct; and

(h) to discharge such other functions and duties as may be assigned to him by the State Government.

(5) The State Government may, by notification, in the Official Gazette, subject to such conditions and limitations, invest with the Devadasi Dedication Prohibition Officer with such powers of a police officer as may be specified in the notification and the Devadasi Dedication Prohibition Officer shall exercise such powers subject to such conditions and limitations, as may be specified therein.

(6) The Devadasi Dedication Prohibition Officer shall have the power to move the court for an order under section 3B for rehabilitation of rescued woman.

(7) The Devadasi Dedication Prohibition Officer shall report the same to the Secretary to Government, Women and Child Development Department, the Managing Director, the Karnataka State Women's Development Corporation and the Deputy Commissioner of respective Districts whenever the incident of dedication occurs or likely to occur in his jurisdiction.

**3E. Devadasi Dedication Prohibition Officers to be public servants.-** The Devadasi Dedication Prohibition Officers shall be deemed to be public servants within the meaning of section 21 of the Indian Penal Code (Central Act 45 of 1860)."

**STATEMENT OF OBJECTS AND REASONS**

It is considered necessary to amend the Karnataka Devadasis (Prohibition of Dedication) Act, 1982,-

(1) to empower the district magistrate or executive magistrate to issue injunction prohibiting likelihood of taking place of dedication to devadasis.

(2) to provide for the rescue, care, protection welfare and rehabilitation of woman from dedication.

(3) to provide that the offences under this Act are cognizable and non-bailable.

(4) to provide for the appointment of Devadasis dedication prohibition officers with powers to prevent such dedication.

Hence, the Bill.

**FINANCIAL MEMORANDUM**

There is no financial implication involved in the proposed measure.

**P.M. NARENDRA SWAMY**
Minister for Women and Child Development

**S.B. PATIL**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಜನವರಿ ೨೧, ೨೦೦೯ (ಮಾಘ ೧, ಶಕ ವರ್ಷ ೧೯೩೦) | ನಂ. ೨೮ |
|---|---|---|

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕವಿಪ:ಶಾರಶಾ:ಉಸಚು:1407:2009, ಬೆಂಗಳೂರು, ಕ್ಯಾಂಪ್: ಬೆಳಗಾವಿ, ದಿನಾಂಕ: 21ನೇ ಜನವರಿ, 2009**

ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ **ಪುಟ್ಟಣ್ಣ** ಅವರು ದಿನಾಂಕ : 21ನೇ ಜನವರಿ, 2009ರಂದು ಕರ್ನಾಟಕ ವಿಧಾನ ಪರಿಷತ್ತಿನ ಉಪ ಸಭಾಪತಿಯವರಾಗಿ ಸರ್ವಾನುಮತದಿಂದ ಚುನಾಯಿತರಾಗಿದ್ದಾರೆ.

**ವಿ. ಶ್ರೀಶ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

**KARNATAKA LEGISLATIVE COUNCIL SECRETARIAT**

**NOTIFICATION**

**No. KLC/Legn/DCE/1407/2009, Bangalore, Camp: Belagavi, Dated : 21st January, 2009**

**Sri Puttanna,** Hon'ble Member, Legislative Council has been elected unanimously as Deputy Chairman of the Karnataka Legislative Council on 21st January, 2009.

**V. SHREESH**
Secretary
Karnataka Legislative Council

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಬುಧವಾರ, ಜನವರಿ ೨೧, ೨೦೦೯ (ಮಾಘ ೧, ಶಕ ವರ್ಷ ೧೯೩೦) | ನಂ. ೨೯ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. LGA/BLA/3/2009, Bangalore, Camp: Belagavi, Dated : 21st January, 2009**

The following Bill was introduced in Legislative Assembly on 21.1.2009.

**THE KARNATAKA PROHIBITION OF VIOLENCE AGAINST MEDICARE SERVICE PERSONNEL AND DAMAGE TO PROPERTY IN MEDICARE SERVICE INSTITUTIONS BILL, 2009**

**(L.A. Bill No. 3 of 2009)**

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಎರಡನೇ ಅಧಿವೇಶನ**

**ಕರ್ನಾಟಕ ವೈದ್ಯೋಪಚಾರ ಸಿಬ್ಬಂದಿಯ ಮೇಲೆ ಹಿಂಸಾಚಾರವನ್ನು ಮತ್ತು ವೈದ್ಯೋಪಚಾರ ಸಂಸ್ಥೆಗಳ ಆಸ್ತಿಗೆ ಹಾನಿ ಮಾಡುವುದನ್ನು ನಿಷೇಧಿಸುವ ವಿಧೇಯಕ, 2009**

**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 3)**

ವೈದ್ಯೋಪಚಾರ ಸಿಬ್ಬಂದಿಯ ಮೇಲಿನ ಹಿಂಸಾಚಾರವನ್ನು ಮತ್ತು ವೈದ್ಯೋಪಚಾರ ಸಂಸ್ಥೆಗಳ ಆಸ್ತಿಗೆ ಹಾನಿ ಮಾಡುವುದನ್ನು ನಿಷೇಧಿಸುವ ಮತ್ತು ಅದಕ್ಕೆ ಸಂಬಂಧಿಸಿದ ಮತ್ತು ಅದಕ್ಕೆ ಪ್ರಾಸಂಗಿಕವಾದ ವಿಷಯಗಳಿಗೆ ಉಪಬಂಧ ಕಲ್ಪಿಸುವ ಒಂದು ವಿಧೇಯಕ.

ವೈದ್ಯೋಪಚಾರ ಸಿಬ್ಬಂದಿಯ ಮೇಲೆ ಹಿಂಸಾಚಾರವನ್ನು ಮತ್ತು ವೈದ್ಯೋಪಚಾರ ಸಂಸ್ಥೆಗಳ ಆಸ್ತಿಗೆ ಹಾನಿ ಮಾಡುವುದನ್ನು ನಿಷೇಧಿಸುವುದು ಮತ್ತು ಅದಕ್ಕೆ ಸಂಬಂಧಿಸಿದ ಮತ್ತು ಅದಕ್ಕೆ ಪ್ರಾಸಂಗಿಕವಾದ ವಿಷಯಗಳಿಗೆ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಐವತ್ತೊಂಬತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ವೈದ್ಯೋಪಚಾರ ಸಿಬ್ಬಂದಿಯ ಮೇಲೆ ಹಿಂಸಾಚಾರವನ್ನು ಮತ್ತು ವೈದ್ಯೋಪಚಾರ ಸಂಸ್ಥೆಗಳ ಆಸ್ತಿಗೆ ಹಾನಿ ಮಾಡುವುದನ್ನು ನಿಷೇಧಿಸುವ ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ, ಸಂದರ್ಭಕ್ಕೆ ಬೇರೆ ಅರ್ಥದ ಅಗತ್ಯವಿದ್ದ ಹೊರತು,–

ಬಗ್ಗೆ ಇತರ ರಾಜ್ಯಗಳ ಮತ್ತು ಕೇಂದ್ರಾಡಳಿತ ಪ್ರದೇಶಗಳ ಮುಖ್ಯ ಕಾರ್ಯದರ್ಶಿಗಳು ಸ್ಪಂದಿಸಬೇಕೆಂದು ನಾವು ನಿರ್ದೇಶನ ನೀಡುತ್ತೇವೆ."

ಈ ಮೇಲಿನ ನಿರ್ದೇಶನಗಳ ಪಾಲನೆಯ ಕ್ರಮವಾಗಿ ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವಲ್ಲಿ ಭಾರತ ದಂಡ ಸಂಹಿತೆಯ 441ನೇ ಪ್ರಕರಣಕ್ಕೆ ಹೊಸ ಪ್ರಕರಣವನ್ನು ಪ್ರತಿಯೋಜಿಸುವುದು ಮತ್ತು ದಂಡ ಪ್ರಕ್ರಿಯಾ ಸಂಹಿತೆ, 1973 ರ (1974ರ ಕೇಂದ್ರ ಅಧಿನಿಯಮ 2) ಮೊದಲನೇ ಅನುಸೂಚಿಯಲ್ಲಿ ಭಾರತ ದಂಡ ಸಂಹಿತೆಯ 447ನೇ ಪ್ರಕರಣಕ್ಕೆ ಸಂಬಂಧಿಸಿದ ನಮೂದುಗಳಲ್ಲಿ ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವಂತೆ ಹೊಸ ನಮೂದನ್ನು ಪ್ರತಿಯೋಜಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಸರ್ಕಾರಿ ವಸತಿಗೃಹಗಳಲ್ಲಿ ಅನಧಿಕೃತವಾಗಿ ವಾಸ ಮಾಡುತ್ತಿರುವ ಅಧಿಕಾರಿಗಳ/ನೌಕರರ ವಿರುದ್ಧ ಕ್ರಮ ತೆಗೆದುಕೊಳ್ಳುವುದನ್ನು ಉಪಬಂಧಿಸಬೇಕೆಂದು ಸರ್ವೋಚ್ಚ ನ್ಯಾಯಾಲಯದ ಸಿವಿಲ್ ಅಪೀಲು ಸಂಖ್ಯೆ: 4064/2004ರಲ್ಲಿ ನೀಡಿದ ತೀರ್ಪಿನ ಪಾಲನೆ ಮಾಡಿರುವ ಭಾರತ ದಂಡ ಸಂಹಿತೆಯ 441 ನೇ ಪ್ರಕರಣದ ಈ ಪ್ರಸ್ತಾವಿತ ತಿದ್ದುಪಡಿಯಿಂದ ಯಾವ ವೆಚ್ಚವೂ ಆಗುವುದಿಲ್ಲ.

**ಡಾ ವಿ.ಎಸ್. ಆಚಾರ್ಯ**

ಗೃಹ ಸಚಿವರು

**ಎಸ್.ಬಿ. ಪಾಟೀಲ್**

ಕಾರ್ಯದರ್ಶಿ

ಕರ್ನಾಟಕ ವಿಧಾನಸಭೆ

**ಅನುಬಂಧ**

**ಭಾರತ ದಂಡ ಸಂಹಿತೆಯ (1860ರ ಕೇಂದ್ರ ಅಧಿನಿಯಮ 45) ಉದ್ಧೃತ ಭಾಗ**

xx xx xx

441. ಅಪರಾಧಿಕ ಅತಿಕ್ರಮಣ.– ಯಾವೊಬ್ಬನು ಅಪರಾಧ ಮಾಡುವ ಉದ್ದೇಶದಿಂದ ಇನ್ನೊಬ್ಬನ ಸ್ವಾಧೀನದಲ್ಲಿರುವ ಸ್ವತ್ತಿನೊಳಕ್ಕೆ ಅಥವಾ ಅದರ ಮೇಲೆ, ಅಂಥ ಸ್ವತ್ತನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ ಯಾವೊಬ್ಬ ವ್ಯಕ್ತಿಯನ್ನು ಹೆದರಿಸುವ, ಅವಮಾನಗೊಳಿಸುವ ಅಥವಾ ಕಿರುಕುಳ ಕೊಡುವ ಉದ್ದೇಶಕ್ಕಾಗಿ ಪ್ರವೇಶಿಸಿದರೆ, ಅಥವಾ ಕಾನೂನು ಬದ್ಧವಾಗಿ ಅಂಥ ಸ್ವತ್ತಿನೊಳಕ್ಕೆ ಅಥವಾ ಅದರ ಮೇಲೆ ಪ್ರವೇಶಿಸಿ ಕಾನೂನಿಗೆ ವಿರುದ್ಧವಾಗಿ ಅಂಥ ಯಾವೊಬ್ಬ ವ್ಯಕ್ತಿಯನ್ನು ಹೆದರಿಸುವ, ಅವಮಾನಗೊಳಿಸುವ ಅಥವಾ ಕಿರುಕುಳ ಕೊಡುವ ಉದ್ದೇಶದಿಂದ ಅಥವಾ ಅಪರಾಧ ಮಾಡುವ ಉದ್ದೇಶದಿಂದ ಅಲ್ಲೇ ಉಳಿದರೆ, ಅವನು ಅಪರಾಧಿಕ ಅತಿಕ್ರಮಣ ಮಾಡಿದ್ದಾನೆಂದು ಹೇಳಲಾಗುತ್ತದೆ.

xx xx xx

**ದಂಡ ಪ್ರಕ್ರಿಯಾ ಸಂಹಿತೆ 1973ರ (1974ರ ಕೇಂದ್ರ ಅಧಿನಿಯಮ 2) ಉಧೃತ ಭಾಗ**

xx xx xx

ಮೊದಲನೇ ಅನುಸೂಚಿ

xx xx xx

ಪ್ರಕರಣ 447.– xx xx

ಅಂಕಣ 5: ಜಾಮೀನೀಯ

**KARNATAKA LEGISLATIVE ASSEMBLY**

**THIRTEENTH LEGISLATIVE ASSEMBLY**

**SECOND SESSION**

**THE INDIAN PENAL CODE AND THE CODE OF CRIMINAL PROCEDURE (KARNATAKA AMENDMENT) BILL, 2009**

**(L.A. Bill No. 6 of 2009)**

A Bill further to amend the Indian Penal Code and the Code of Criminal Procedure, 1973 in their application to the State of Karnataka.

Whereas it is expedient further to amend the Indian Penal Code (Central Act 45 of 1860) and the Code of Criminal Procedure, 1973 (Central Act 2 of 1974), in their application to the State of Karnataka for the purposes hereinafter appearing;

Be it enacted by the Karnataka State Legislature in the Fifty-ninth year of the Republic of India as follows:-

**1. Short title and commencement.-** (1) This Act may be called the Indian Penal Code and the Code of Criminal Procedure (Karnataka Amendment) Act, 2009.

(2) It shall come into force at once.

**2. Amendment of Central Act 45 of 1860 .-** In the Indian Penal Code (Central Act 45 of 1860), for section 441, the following shall be substituted, namely:-

**"441. Criminal trespass.-** Whoever enters into or upon property in possession of another with intent to commit an offence or to intimidate, insult or annoy any person in possession of such property, or, having lawfully entered into or upon such property, unlawfully remains there with intent thereby to intimidate, insult or annoy any such person or with intent to commit an offence,

or, having entered into or upon such property, whether before or after the coming into force of the Indian Penal Code and the Code of Criminal Procedure (Karnataka Amendment) Act, 2009, with the intention of taking unauthorized possession or making unauthorized use of such property fails to withdraw from such property or its possession or use, when called upon to do so by that another person by notice in writing, duly served upon him, by the date specified in the notice is said to commit Criminal Trespass."

**3. Amendment of Central Act 2 of 1974.-** In the Code of Criminal Procedure, 1973 (Central Act 2 of 1974), in the First Schedule, in section 447, in the entries in column (5), for the word "Bailable", the word "Non-bailable" shall be substituted.

**STATEMENT OF OBJECTS AND REASONS**

The Supreme Court in Civil Appeal No.4064 of 2004 Sri S.D.Bandi Vs Divisional Traffic Officer, KSRTC and others has given the following directions, namely:-

"11. Keeping in mind the mushroom growth of unauthorized occupation of government premises in almost all parts of the country, in flagrant violation of all the rules prevalent in a civilized society, which is detrimental to the interest of large number of government servants who have been waiting for years together for allotment of government premises, we feel that a time has come that governments of all the other States and Union Territories should bestow their thoughts and consider desirability of taking steps for amendment of section 441 I.P.C. by Legislatures of the respective States on the lines of the amendments made in States of Uttar Pradesh or Orissa. They should also consider desirability of amending First Schedule of the Code for making the offence under section 441 I.P.C. to be non-bailable so far as it relates to continuance of government servants in government premises even after the service of notices upon them to vacate the same. We direct the Chief Secretaries of all other States and Union Territories to respond in this regard before the next date fixed."

In compliance of the above directions it is considered necessary to substitute section 441 of the Indian Penal Code and entries relating to section 447 in the First Schedule of the Code of Criminal Procedure, 1973 ( Central Act 2 of 1974) in its application to the State of Karnataka.

Hence, the Bill.

**FINANCIAL MEMORANDUM**

The proposed amendment to section 441 of Indian Penal Code brought in compliance of the judgment of Supreme Court in Civil Appeal No. 4064/2004 to provide for taking action against officers/officials residing unauthorisedly in Government quarters involves no expenditure.

**Dr. V.S. ACHARYA**
Minister for Home

**S.B. PATIL**
Secretary
Karnataka Legislative Assembly

**ANNEXURE**

**EXTRACT FROM THE INDIAN PENAL CODE**
**(CENTRAL ACT NO.45 of 1860)**

xx xx xx

**441.Criminal trespass,-** Whoever enters into or upon property in the possession of another with intent to commit an offence or to intimidate, insult or annoy any person in possession of such property,or having lawfully entered into or upon such property, unlawfully remains there with intent thereby to intimidate, insult or annoy any such person, or with intent to commit an offence, is said to commit "criminal trespass

xx xx xx

**EXTRACT FROM THE CODE OF CRIMINAL PROCEDURE,1973**
**(Central Act 2 of 1974)**

xxx xxx

First Schedule.-xx
Section 447,- xxx
Column 5,- Bailable

**ವಿಶೇಷ ಪತ್ರಿಕೆ**

| | | |
|---|---|---|
| ಭಾಗ – **IV-A** | ಬೆಂಗಳೂರು, ಬುಧವಾರ, ಜನವರಿ ೨೧, ೨೦೦೯ (ಮಾಘ ೧, ಶಕ ವರ್ಷ ೧೯೩೦) | ನಂ. ೩೨ |

**KARNATAKA LEGISLATIVE ASSEMBLY SECRETARIAT**

**NOTIFICATION**

**No. LGA/BLA/7/2009, Bangalore, Camp: Belagavi, Dated : 21st January, 2009**

The following Bill was introduced in Legislative Assembly on 21.1.2009.

**THE KARNATAKA MUNICIPAL CORPORATIONS (AMENDMENT) BILL, 2009**
**(L.A. Bill No. 7 of 2009)**

**ಕರ್ನಾಟಕ ವಿಧಾನ ಸಭೆ**
**ಹದಿಮೂರನೇ ವಿಧಾನಸಭೆ**
**ಎರಡನೇ ಅಧಿವೇಶನ**

**ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ವಿಧೇಯಕ, 2009**
**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 7)**

ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 (1977ರ ಕರ್ನಾಟಕ ಅಧಿನಿಯಮ 14) ನ್ನು ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಐವತ್ತೊಂಬತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:-

1. **ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ಅಧಿನಿಯಮ, 2009 ಎಂದು ಕರೆಯತಕ್ಕದ್ದು.

(2) ಇದು ಕರ್ನಾಟಕ ಪೌರ ನಿಗಮಗಳ (ತಿದ್ದುಪಡಿ) ಅಧ್ಯಾದೇಶ 2008 (2008ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 1) ಜಾರಿಗೆ ಬಂದ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ.-** ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 (1976ರ ಕರ್ನಾಟಕ ಅಧಿನಿಯಮ 14) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ). 3ನೇ ಪ್ರಕರಣದಲ್ಲಿ (2)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"ಪರಂತು, "ಬೆಂಗಳೂರು ನಗರಪಾಲಿಕೆ"ಯನ್ನು "ಬೃಹತ್ ಬೆಂಗಳೂರು ಮಹಾನಗರಪಾಲಿಕೆ" ಎಂದು ಕರೆಯತಕ್ಕದ್ದು."

**3. 108ಎ ಹೊಸ ಪ್ರಕರಣದ ಸೇರ್ಪಡೆ.-** ಮೂಲ ಅಧಿನಿಯಮದ 108ಎ ಪ್ರಕರಣದ ತರುವಾಯ, ಈ ಮುಂದಿನ ಹೊಸ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:-

**"108ಎ. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಸಂಬಂಧದಲ್ಲಿ ಆಸ್ತಿ ತೆರಿಗೆಯ ವಿಧಿಸುವಿಕೆ ಮತ್ತು ಲೆಕ್ಕಾಚಾರ.-** (1) ಈ ಅಧಿನಿಯಮದಲ್ಲಿ ಇದಕ್ಕೆ ವಿರುದ್ಧವಾಗಿ ಏನೇ ಇದ್ದರೂ, ಈ ಅಧಿನಿಯಮದಡಿಯಲ್ಲಿ ಉಪಬಂಧಿಸಲಾದಂಥ ವಿನಾಯಿತಿಗಳಿಗೆ ಮತ್ತು ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಪ್ರದೇಶದ ನಗರದೊಳಗೆ ಇರುವ ಎಲ್ಲಾ ಕಟ್ಟಡಗಳಿಗೆ ಅಥವಾ ಖಾಲಿ ಜಾಗಗಳಿಗೆ ಅಥವಾ ಅವೆರಡಕ್ಕೂ ಪ್ರತಿವರ್ಷವೂ ಈ ಮುಂದಿನ ರೀತಿಯಲ್ಲಿ ಆಸ್ತಿ ತೆರಿಗೆಯನ್ನು ವಿಧಿಸತಕ್ಕದ್ದು.

(2) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು, 106ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದಂತೆ ನಿರ್ಣಯವನ್ನು ಹೊರಡಿಸಿ, ಕಟ್ಟಡದ, ಖಾಲಿಜಾಗದ ಅಥವಾ ಅವೆರಡರ **ತೆರಿಗೆ ವಿಧಿಸಬಹುದಾದ ವಾರ್ಷಿಕ ಮೌಲ್ಯದ** ಶೇಕಡ 20ಕ್ಕೆ ಕಡಿಮೆಯಿಲ್ಲದ ಮತ್ತು ಶೇಕಡ 25ನ್ನು ಮೀರದ ಶೇಕಡಾವಾರು ದರದಲ್ಲಿ ಆಸ್ತಿ ತೆರಿಗೆಯನ್ನು ವಿಧಿಸತಕ್ಕದ್ದು. ಒಂದು ಕಟ್ಟಡಕ್ಕೆ, ಖಾಲಿಜಾಗಕ್ಕೆ ಅಥವಾ ಅವೆರಡಕ್ಕೂ ತೆರಿಗೆ ವಿಧಿಸಬಹುದಾದ ವಾರ್ಷಿಕ ಮೌಲ್ಯವನ್ನು, ಲೆಕ್ಕಾಚಾರ ಮಾಡಲು ಮೊದಲು ಕಟ್ಟಡದ, ಖಾಲಿ ಜಾಗದ ಅಥವಾ ಅವೆರಡರ ಒಟ್ಟು ನಿರ್ಮಿತ ಪ್ರದೇಶವನ್ನು ಸಂವಾದಿಯಾದ "ಘಟಕ ಪ್ರದೇಶ ಮೌಲ್ಯ" ದಿಂದ ಗುಣಾಕಾರ ಮಾಡಿ ಬಂದ ಗುಣಲಬ್ಧವನ್ನು ಹತ್ತು ತಿಂಗಳುಗಳಿಗೆ ಲೆಕ್ಕ ಹಾಕತಕ್ಕದ್ದು ಮತ್ತು ಕಟ್ಟಡಕ್ಕೆ ಆಗಿರುವ ವಯಸ್ಸಿನ ಆಧಾರದ ಮೇಲೆ ನಿಯಮಿಸಬಹುದಾದಂಥ ದರದಲ್ಲಿ ಸವಕಳಿಯನ್ನು ಅದರಿಂದ ಕಳೆಯತಕ್ಕದ್ದು.

**ವಿವರಣೆ:** ಈ ಪ್ರಕರಣದ ಉದ್ದೇಶಕ್ಕಾಗಿ, "ಘಟಕ ಪ್ರದೇಶ ಮೌಲ್ಯ" ಎಂದರೆ, ಸಮೂಹ ಮೌಲ್ಯ ನಿರ್ಣಯ ವಿಧಾನ ಅಥವಾ ಸ್ಥಿರಾಸ್ತಿ ಮಾರುಕಟ್ಟೆ ಮಾಹಿತಿ ಅಥವಾ ಇತರ ನಂಬಲರ್ಹ ಮೂಲ ಅಥವಾ ಈ ಮೂಲಗಳ ಸಂಯೋಜನೆಯ ಮೂಲಕ, ಕಟ್ಟಡ ನಿರ್ಮಾಣದ ರೀತಿ, ಖಾಲಿ ಜಾಗ ಅಥವಾ ಕಟ್ಟಡವನ್ನು ಉಪಯೋಗಿಸಿರುವ ಸ್ವರೂಪ, ಖಾಲಿ ಜಾಗದ ವಿಸ್ತೀರ್ಣ, ಕಟ್ಟಡ ನಿರ್ಮಿತ ಪ್ರದೇಶ, ಕಟ್ಟಡದ ವಯಸ್ಸು, ವಸತಿಯೇತರ ಕಟ್ಟಡದಲ್ಲಿ ವಾಹನಗಳ ನಿಲುಗಡೆಗೆ ಚಾರ್ಜು ಮಾಡಿ

ನಿಲುಗಡೆ ಅವಕಾಶ ಕಲ್ಪಿಸಿರುವ ಪ್ರದೇಶ ಮತ್ತು ನಿಯಮಿಸಬಹುದಾದಂಥ ಇತರ ಮಾನದಂಡಗಳನ್ನು ಗಮನದಲ್ಲಿಟ್ಟುಕೊಂಡು ತಾನು ಪರ್ಯಾಪ್ತ ಮತ್ತು ಸಮಂಜಸವೆಂದು ಪರಿಗಣಿಸಿ ಅಥವಾ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರು ನಿರ್ಧರಿಸಿದ ಸರಾಸರಿ ಮಾರುಕಟ್ಟೆ ದರದ ಆಧಾರದ ಮೇಲೆ ಪ್ರತಿ ತಿಂಗಳಿಗೆ ಪ್ರತಿ ಚದರಡಿಯಿಂದ ನಿರೀಕ್ಷಿಸಲಾದ ಆದಾಯದ ಸರಾಸರಿ ದರ. ವಲಯಗಳಾಗಿ ವರ್ಗೀಕರಿಸಿದ ವಿವಿಧ ಪ್ರದೇಶಕ್ಕೆ ಅಥವ ಬೀದಿಗೆ, ಖಾಲಿ ಜಾಗವನ್ನು ಅಥವಾ ಕಟ್ಟಡವನ್ನು ಬಳಸಿದ ವಿಭಿನ್ನ ಸ್ವರೂಪಕ್ಕೆ ಮತ್ತು ವಿವಿಧ ವರ್ಗದ ಕಟ್ಟಡಗಳು ಮತ್ತು ಖಾಲಿ ಜಾಗಗಳಿಗೆ ಪ್ರತ್ಯೇಕ ದರಗಳನ್ನು ನಿಗದಿಪಡಿಸಬಹುದು:

ಪರಂತು, "ಘಟಕ ಪ್ರದೇಶ ಮೌಲ್ಯ" ವನ್ನು ಕುರಿತು ಅದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳ ಮಾಹಿತಿಗಾಗಿ ಈ ಬಗ್ಗೆ, ಯಾವುದೇ ಮನವಿಯನ್ನು ಸಲ್ಲಿಸುವುದಕ್ಕೆ ಅಥವಾ ಸಲಹೆಗಳನ್ನು ನೀಡುವುದಕ್ಕೆ ಒಂದು ಅವಕಾಶವನ್ನು ಒದಗಿಸುವುದಕ್ಕಾಗಿ, ಅದನ್ನು ಈ ಹಿಂದೆಯೇ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ್ದ ಹೊರತು, ಅಂಥ ಯಾವ ಘಟಕ ಪ್ರದೇಶ ಮೌಲ್ಯವೂ ಜಾರಿಗೆ ಬರತಕ್ಕದ್ದಲ್ಲ:

ಮತ್ತೂ ಪರಂತು, ಒಂದು ಕಟ್ಟಡಕ್ಕೆ ಹೊಂದಿಕೊಂಡಿರುವ ಮತ್ತು ಅಂಥ ಕಟ್ಟಡವನ್ನು ಕಟ್ಟಿರುವ ಪ್ರದೇಶದ ಮೂರರಷ್ಟನ್ನು ಮೀರದ ವಿಸ್ತೀರ್ಣದ, ಭೂಮಿಗೆ, ಆಸ್ತಿ ತೆರಿಗೆಯಿಂದ ವಿನಾಯಿತಿ ನೀಡತಕ್ಕದ್ದು:

ಅಷ್ಟೇ ಅಲ್ಲದೆ, ಅಧಿಸೂಚಿಸಬಹುದಾದಂಥ ಷರತ್ತುಗಳು ಮತ್ತು ಅಂಥ ಸನ್ನಿವೇಶಗಳಿಗೊಳಪಟ್ಟು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರು,–

(ಎ) ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನಾ ಮಂಡಳಿಯಿಂದ ಅಥವಾ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರಿಂದ ಕೊಳಚೆ ಪ್ರದೇಶವೆಂದು ಘೋಷಿಸಲ್ಪಟ್ಟಿರುವ ಒಂದು ಪ್ರದೇಶದಲ್ಲಿರುವ 200 ಚದರಡಿಗಿಂತಲೂ ಕಡಿಮೆ ವಿಸ್ತೀರ್ಣದ ಕಟ್ಟಡ ನಿರ್ಮಿತ ಪ್ರದೇಶದ; ಮತ್ತು

(ಬಿ) ನಿವಾಸೇತರ ಕಟ್ಟಡದಲ್ಲಿ ವಾಹನ ನಿಲುಗಡೆ ಪ್ರದೇಶವಾಗಿ ಉಪಯೋಗಿಸುತ್ತಿದ್ದು ಅದರ ಮಾಲೀಕ ಅಥವಾ ಅಧಿಭೋಗದಾರನು ಅದರ ಉಪಯೋಗಕ್ಕಾಗಿ ಚಾರ್ಜು ಮಾಡಿರುವ ಪ್ರದೇಶದ,

(ಸಿ) ಅವರು ಸೂಕ್ತವೆಂದು ಭಾವಿಸಬಹುದಾದಂಥ ಯಾವುವೇ ಇತರ ವರ್ಗಗಳ ಕಟ್ಟಡ ಅಥವಾ ನಿರ್ಮಿತಿಯ,

–ಸಂಬಂಧದಲ್ಲಿ, ವಲಯ ವರ್ಗೀಕರಣವನ್ನು ಗಣನೆಗೆ ತೆಗೆದುಕೊಳ್ಳದೆ, (2)ನೇ ಉಪ ಪ್ರಕರಣದ ಅಡಿಯಲ್ಲಿನ ತೆರಿಗೆಗೆ ಬದಲಾಗಿ ಒಂದು ಇಡಿಗಂಟು ಮೊತ್ತವನ್ನು ವಾರ್ಷಿಕ ತೆರಿಗೆಯನ್ನಾಗಿ ನಿಗದಿಪಡಿಸಬಹುದು.

(3) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಸರ್ಕಾರಿ ಭೂಮಿಯಲ್ಲಿ ಯಾವುದೇ ಸ್ಥಳೀಯ ನಿಕಾಯದ ಭೂಮಿಯಲ್ಲಿ ಯಾವುದೇ ಶಾಸನಬದ್ಧ ನಿಕಾಯದ ಭೂಮಿಯಲ್ಲಿ ಅಥವಾ ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಒಂದು ಸಂಸ್ಥೆಗೆ ಸೇರಿರುವ ಭೂಮಿಯಲ್ಲಿ ಕಾನೂನು ಬಾಹಿರವಾಗಿ ನಿರ್ಮಿಸಿದ ಕಟ್ಟಡವನ್ನು ಹೊರತುಪಡಿಸಿ, ಕಟ್ಟಡದ ಬೈಲಾ ಉಪಬಂಧಗಳನ್ನು ಉಲ್ಲಂಘಿಸಿ ಕಟ್ಟಿರುವ ಕಟ್ಟಡದ ಅಥವಾ ಅನಧಿಕೃತ ಲೇಔಟ್‌ನಲ್ಲಿ ಅಥವಾ ರೆವಿನ್ಯೂ ಭೂಮಿಯಲ್ಲಿ ಕಟ್ಟಿರುವ ಕಟ್ಟಡ ಅಥವಾ ಅಧಿಭೋಗ ಪ್ರಮಾಣ ಪತ್ರ ಅಥವಾ ಮುಕ್ತಾಯ ಪ್ರಮಾಣಪತ್ರವನ್ನು ಪಡೆದುಕೊಳ್ಳದೇ ವಾಸ ಮಾಡುತ್ತಿರುವ ಕಟ್ಟಡವೂ ಸೇರಿದಂತೆ, ಎಲ್ಲಾ ಕಟ್ಟಡಗಳು, ಖಾಲಿ ಜಾಗಗಳಿಗೆ ಅಥವಾ ಅವೆರಡಕ್ಕೂ ಆಸ್ತಿ ತೆರಿಗೆಯನ್ನು ವಿಧಿಸಬಹುದು ಮತ್ತು ವಸೂಲು ಮಾಡಬಹುದು. ಅಂಥ ಕಟ್ಟಡಗಳಿಂದ ವಸೂಲು ಮಾಡಿದ ಆಸ್ತಿ ತೆರಿಗೆಯ ಲೆಕ್ಕವನ್ನು ಒಂದು ಪ್ರತ್ಯೇಕ ರಿಜಿಸ್ಟರಿನಲ್ಲಿ ಇಟ್ಟುಕೊಂಡು ಬರತಕ್ಕದ್ದು:

ಪರಂತು, ಈ ಪ್ರಕರಣದಡಿಯಲ್ಲಿ ಅಂಥ ಕಟ್ಟಡಗಳ ಸಂಬಂಧದಲ್ಲಿ ಆಸ್ತಿ ತೆರಿಗೆಯನ್ನು ವಿಧಿಸಿ ವಸೂಲು ಮಾಡುವುದು, ಮಾಡಿದ ಯಾವುದೇ ಉಲ್ಲಂಘನೆಯನ್ನು ಸಕ್ರಮಗೊಳಿಸಲು ಯಾವುದೇ ಹಕ್ಕನ್ನಾಗಲಿ, ಅಂಥ ಕಟ್ಟಡಕ್ಕೆ ಹಕ್ಕುಸ್ವಾಮ್ಯ, ಒಡೆತನ ಅಥವಾ ಕಾನೂನಿನ ಸ್ಥಾನಮಾನವನ್ನಾಗಲಿ ದೊರಕಿಸಿ ಕೊಡುವುದಿಲ್ಲ. ಅಂಥ ಕಟ್ಟಡಗಳು ಕಾನೂನಿನ ಉಲ್ಲಂಘನೆಗಾಗಿ ಈ ಅಧಿನಿಯಮದ ಅಥವಾ ಯಾವುದೇ ಇತರ ಕಾನೂನಿನ ಉಪಬಂಧಗಳನ್ವಯ ಯಾವುದೇ ಕ್ರಮಕ್ಕೆ ಗುರಿಯಾಗಲು ಯಾವಾಗಲೂ ಬದ್ಧವಾಗಿರತಕ್ಕದ್ದು.

(4) ನಿವಾಸದ ಉದ್ದೇಶಕ್ಕಾಗಿ ಉಪಯೋಗಿಸುತ್ತಿರುವ ಸ್ವಂತ ವಾಸದ ಕಟ್ಟಡದ ಮೇಲೆ ಮತ್ತು ನಗರ ಪಾಲಿಕೆಯ ಶಿಫಾರಸ್ಸಿನ ಮೇಲೆ ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂಥ ನಿವಾಸೇತರ ಉದ್ದೇಶಕ್ಕಾಗಿ ಸ್ವಂತಕ್ಕೆ ಬಳಸುತ್ತಿರುವ ಕಟ್ಟಡದ ವರ್ಗದ ಸಂಬಂಧದಲ್ಲಿ ಸಂದಾಯ ಮಾಡತಕ್ಕ ಆಸ್ತಿ ತೆರಿಗೆಯನ್ನು ಶೇಕಡಾ ಐವತ್ತರಷ್ಟು ಕಡಿಮೆ ಮಾಡತಕ್ಕದ್ದು.

(5) 107, 110, 111, 112, 112ಬಿ, 112ಡಿ ಮತ್ತು 113ನೇ ಪ್ರಕರಣಗಳಲ್ಲಿ ಇರುವ ಉಪಬಂಧಗಳು ಈ ಪ್ರಕರಣದ ಉಪಬಂಧಗಳಿಗೆ ಅವು ಅಸಂಗತವಾಗದೇ ಇರುವಷ್ಟರ ಮಟ್ಟಿಗೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಯಥೋಚಿತ ಬದಲಾವಣೆಗಳೊಂದಿಗೆ ಅನ್ವಯವಾಗತಕ್ಕದ್ದು:

ಪರಂತು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಕರನಿರ್ಧರಣೆ ಮಾಡಿದ ಆಸ್ತಿಗಳ ಸಂಬಂಧದಲ್ಲಿ ರಾಜ್ಯ ಸರ್ಕಾರವು ಪ್ರತ್ಯೇಕ ಕಾರ್ಯವಿಧಾನ, ನಮೂನೆ ಅಥವಾ ರಿಜಿಸ್ಟರನ್ನು ನಿಯಮಿಸಬಹುದು. ಕರನಿರ್ಧರಣೆ ಮಾಡಲಾದ ಬೇರೆ ಬೇರೆ ವರ್ಗದ ಆಸ್ತಿಗೆ ಬೇರೆ ಬೇರೆ ರಿಜಿಸ್ಟರುಗಳನ್ನು ನಿಯಮಿಸಬಹುದು.

(6) ಆಸ್ತಿ ತೆರಿಗೆಯನ್ನು ಪಾವತಿಸಲು ಮುಖ್ಯವಾಗಿ ಹೊಣೆಗಾರನಾದ ವ್ಯಕ್ತಿಯು, ತೆರಿಗೆಯನ್ನು ಎರಡು ಸಮನಾದ ಕಂತುಗಳಲ್ಲಿ ಸಂದಾಯ ಮಾಡತಕ್ಕದ್ದು. ಮೊದಲನೆಯ ಕಂತನ್ನು ಪ್ರತಿ ಆರ್ಥಿಕ ವರ್ಷದ ಮೇ 30 ರೊಳಗೆ ಮತ್ತು ಎರಡನೆಯದನ್ನು ನವೆಂಬರ್ 29ರೊಳಗೆ ಸಂದಾಯ ಮಾಡತಕ್ಕದ್ದು. ಹೀಗಿದ್ದರೂ ಆಸ್ತಿ ತೆರಿಗೆಯನ್ನು ಸಂದಾಯ ಮಾಡಲು ಮುಖ್ಯವಾಗಿ ಹೊಣೆಗಾರನಾದ ಮಾಲೀಕ ಅಥವಾ ಅಧಿಭೋಗದಾರ ಅಥವಾ ವ್ಯಕ್ತಿಯು ಒಂದೇ ಕಂತಿನಲ್ಲಿ ಸಂದಾಯ ಮಾಡುವುದನ್ನೂ ಆಯ್ಕೆ ಮಾಡಿಕೊಳ್ಳಬಹುದು:

ಪರಂತು, 2008-09ನೇ ವರ್ಷಕ್ಕೆ ಮತ್ತು ಅದರ ನಂತರದ ವರ್ಷಗಳಿಗೆ ಸಂಬಂಧಪಟ್ಟಂತೆ ಮೊದಲನೆಯ ಕಂತನ್ನು ಕರ್ನಾಟಕ ಪೌರನಿಗಮಗಳ (ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭದ ದಿನಾಂಕದಿಂದ ಅರವತ್ತು ದಿನಗಳೊಳಗಾಗಿ ಸಂದಾಯ ಮಾಡತಕ್ಕದ್ದು ಮತ್ತು ಎರಡನೆಯ ಕಂತನ್ನು ಅದರ ನಂತರದ ಮೂವತ್ತು ದಿನಗಳೊಳಗಾಗಿ ಪಾವತಿಸತಕ್ಕದ್ದು:

ಮತ್ತೂ ಪರಂತು, ತೆರಿಗೆಯನ್ನು ಪಾವತಿಸಲು ಹೊಣೆಗಾರನಾದ ಮಾಲೀಕ ಅಥವಾ ಅಧಿಭೋಗದಾರನು 2008-09ನೇ ವರ್ಷದ್ದೂ ಸೇರಿದಂತೆ ಇಡೀ ವರ್ಷಕ್ಕೆ ತೆರಿಗೆಯನ್ನು ಪ್ರತಿ ವರ್ಷದ ಪ್ರಾರಂಭದ ದಿನಾಂಕದಿಂದ ಒಂದು ತಿಂಗಳೊಳಗೆ ವಿವರ ಪತ್ರವನ್ನು ಸಲ್ಲಿಸಿ ತೆರಿಗೆಯನ್ನು ಪಾವತಿಸಿದರೆ, ಆತನು ಸಂದಾಯ ಮಾಡತಕ್ಕ ತೆರಿಗೆಯ ಮೇಲೆ ಶೇಕಡಾ ಐದರ ರಿಯಾಯತಿ ನೀಡತಕ್ಕದ್ದು:

ಅಷ್ಟೇ ಅಲ್ಲದೆ ರಾಜ್ಯ ಸರ್ಕಾರವು ಪೌರನಿಗಮದ ಶಿಫಾರಸ್ಸಿನ ಮೇಲೆ ಅಧಿಸೂಚನೆಯ ಮೂಲಕ, 2008-09 ಹಾಗೂ 2009-2010ನೇ ಹಣಕಾಸಿನ ಸಾಲಿಗೆ ಸಂಬಂಧಿಸಿದಂತೆ ದಂಡವಿಲ್ಲದೆ ಸ್ವತ್ತು ತೆರಿಗೆಯನ್ನು ಸಂದಾಯ ಮಾಡಲು ಮತ್ತು ಶೇಕಡ 5ರ ರಿಯಾಯಿತಿ ಸೌಲಭ್ಯವನ್ನು ಪಡೆಯಲು ಕಾಲಪರಿಮಿತಿಯನ್ನು ವಿಸ್ತರಣೆ ಮಾಡಬಹುದು.

ಅದೂ ಅಲ್ಲದೆ, ನಿಯಮಿಸಬಹುದಾದ ರೀತಿಯಲ್ಲಿ ಅನಿಶ್ಚಿತ ಆಯ್ಕೆ ಮಾಡಿ ಪರಿಶೀಲಿಸುವುದಕ್ಕೆ ಒಳಪಟ್ಟು, 2008-09ರ ಅವಧಿಗಾಗಿ ಮೊದಲಬಾರಿ ದಾಖಲುಮಾಡಿದ ತೆರಿಗೆ ವಿವರ ಪತ್ರವು ಪ್ರತಿ ಬ್ಲಾಕ್ ವರ್ಷಕ್ಕಾಗಿ ಅನ್ವಯಿಸುವ ತೆರಿಗೆ ಸಂದಾಯಕ್ಕೆ ಆಧಾರವಾಗತಕ್ಕದ್ದು.

(7) ಯಾವೊಬ್ಬ ಮಾಲೀಕ ಅಥವಾ ಅಧಿಭೋಗದಾರನು (8)ನೇ ಉಪ ಪ್ರಕರಣದ ಅಡಿಯಲ್ಲಿ ಯಾವುದೇ ವಿವರ ಪತ್ರವನ್ನು ಸಲ್ಲಿಸುವ ಮೊದಲು ಆತನು ಸತ್ಯವಾದುದು ಮತ್ತು ಪೂರ್ಣವಾದುದು ಎಂದು ಘೋಷಿಸಿ ಸಲ್ಲಿಸಿದ ವಿವರ ಪತ್ರದ ಆಧಾರದ ಮೇಲೆ ಲೆಕ್ಕ ಹಾಕಿದ ಆ ವರ್ಷಕ್ಕೆ ಸಂದಾಯ ಮಾಡಬೇಕಾದ ಅರ್ಧ ವರ್ಷಕ್ಕೆ ಸ್ವತ್ತು ತೆರಿಗೆಯನ್ನು ಅಥವಾ ಪೂರ್ಣ ವರ್ಷಕ್ಕೆ ಲೆಕ್ಕ ಹಾಕಿದ ತೆರಿಗೆಯ ಮೊಬಲಗನ್ನು ಮುಂಗಡವಾಗಿ ಸಂದಾಯ ಮಾಡತಕ್ಕದ್ದು.

(8) 112ಎ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ ಏನೇ ಇದ್ದರೂ, ರಾಜ್ಯ ಸರ್ಕಾರವು ಈ ಪ್ರಕರಣದ ಅಡಿಯಲ್ಲಿ ಸ್ವತ್ತು ತೆರಿಗೆಯನ್ನು ಸಂದಾಯ ಮಾಡಲು ಹೊಣೆಗಾರನಾದ ಪ್ರತಿಯೊಬ್ಬ ಮಾಲೀಕ ಅಥವಾ ಅಧಿಭೋಗದಾರನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರಿಗೆ ಅಥವಾ ಈ ಸಂಬಂಧದಲ್ಲಿ ಅವರು ಅಧಿಕೃತಗೊಳಿಸಿದ ಅಧಿಕಾರಿಗೆ ಅಥವಾ ಏಜನ್ಸಿಗೆ ಪ್ರತಿ ವರ್ಷವು ಸಲ್ಲಿಸತಕ್ಕ ವಿವರಪತ್ರದ ನಮೂನೆ ಮತ್ತು ವಿಧಾನವನ್ನು ನಿಯಮಿಸಬಹುದು

(9) ಯಾವುದೇ ಕಟ್ಟಡ ಅಥವಾ ಖಾಲಿ ಭೂಮಿಯ ಅಥವಾ ಅವೆರಡರ ಮಾಲಿಕ ಅಥವಾ ಅಧಿಭೋಗದಾರನು ವಿವರ ಪತ್ರವನ್ನು ಸಲ್ಲಿಸುವುದಕ್ಕೆ ಅಥವಾ ಈ ಪ್ರಕರಣದ ಅಡಿಯಲ್ಲಿ ಸ್ವತ್ತು ತೆರಿಗೆಯ ನಿರ್ಧರಣೆಗೆ ಅನುಕೂಲ ಮಾಡಿಕೊಡುವ ಉದ್ದೇಶದಿಂದ ಆಯುಕ್ತರು ಘಟಕ ಪ್ರದೇಶ ಮೌಲ್ಯವನ್ನು ಮತ್ತು ಅದರ ಮೇಲೆ ಸಂದಾಯಮಾಡತಕ್ಕ ತೆರಿಗೆಯನ್ನು ನಿರ್ಧರಿಸಲು ಮಾರ್ಗಸೂಚಿಗಳನ್ನು ಕಾಲಕಾಲಕ್ಕೆ ಹೊರಡಿಸತಕ್ಕದ್ದು.

(10) ನಿಯಮಿಸಲಾದ ವಿಧಾನದಲ್ಲಿ ಸಲ್ಲಿಸಲಾದ ವಿವರ ಪತ್ರಗಳನ್ನು ಅನಿಶ್ಚಿತವಾಗಿ ಆಯ್ಕೆ ಮಾಡಿ ಪರಿಶೀಲನೆ ಮಾಡಲು ಆಯುಕ್ತರು ಅಥವಾ ಅಧಿಕೃತ ಅಧಿಕಾರಿಯು ಕೈಗೆತ್ತಿಕೊಳ್ಳಬಹುದಾದ ಅಥವಾ ಅಧೀನ ಅಧಿಕಾರಿಯನ್ನು ಅಧಿಕೃತಗೊಳಿಸಬಹುದಾದ ವಿವರ ಪತ್ರಗಳ ಸಂದರ್ಭಗಳನ್ನು ಹೊರತುಪಡಿಸಿ, ಮಾಲೀಕ ಅಥವಾ ಅಧಿಭೋಗದಾರನು ಸಲ್ಲಿಸಿದ ಪ್ರತಿಯೊಂದು ವಿವರ ಪತ್ರವನ್ನು ಕರ ನಿರ್ಧರಣೆ ಮಾಡಲಾಗಿದೆ ಎಂದು ಭಾವಿಸತಕ್ಕದ್ದು.

ಪರಂತು, ಆಯುಕ್ತರು ಸ್ವಪ್ರೇರಣೆಯಿಂದ ಆಗಲಿ ಅಥವಾ ಅನ್ಯಥಾ, ಮಾಲೀಕ ಅಥವಾ ಅಧಿಭೋಗದಾರನು ತೆರಿಗೆ ತಪ್ಪಿಸಿಕೊಳ್ಳುತ್ತಿದ್ದಾನೆಂದು ನಂಬಲು ಕಾರಣ ಹೊಂದಿದ್ದಾಗ ಅಂಥ ಕಟ್ಟಡವನ್ನು ತಪಾಸಣೆ ಮಾಡಿಸಬಹುದು ಮತ್ತು ತೆರಿಗೆಯನ್ನು ನಿರ್ಧರಿಸಬಹುದು.

(11) ಯಾವುದೇ ಕಟ್ಟಡ ಅಥವಾ ಭೂಮಿಗಳ ಅಥವಾ ಅವೆರಡರ ಸಂಬಂಧದಲ್ಲಿ ಸಲ್ಲಿಸಿದ ವಿವರ ಪತ್ರಗಳನ್ನು ಅನಿಶ್ಚಿತವಾಗಿ ಆಯ್ದು ಪರಿಶೀಲಿಸುವ ಅಥವಾ (8)ನೇ ಉಪಪ್ರಕರಣದ ಅಡಿಯಲ್ಲಿ ಅಗತ್ಯಪಡಿಸಲಾದಂತೆ ವಿವರ ಪತ್ರವನ್ನು ಸಲ್ಲಿಸದಿರುವ ಪ್ರಕರಣಗಳಲ್ಲಿ ಪರಿಶೀಲಿಸುವ ಉದ್ದೇಶಕ್ಕಾಗಿ ಆಯುಕ್ತರು ಅಥವಾ ಈ ಸಂಬಂಧದಲ್ಲಿ ಅವರು ಅಧಿಕೃತಗೊಳಿಸಿದ ಯಾವೊಬ್ಬ ವ್ಯಕ್ತಿಯು, ಮಾಲೀಕ ಅಥವಾ ಅಧಿಭೋಗದಾರನಿಗೆ ಸೂಚನೆಯನ್ನು ನೀಡಿದ ತರುವಾಯ, ಯಾವುದೇ ಭೂಮಿ ಅಥವಾ ಕಟ್ಟಡವನ್ನು ಪ್ರವೇಶಿಸಬಹುದು, ಪರೀಕ್ಷಿಸಬಹುದು, ಸಮೀಕ್ಷಿಸಬಹುದು ಅಥವಾ ಅಳತೆ ಮಾಡಬಹುದು ಮತ್ತು ಮಾಲೀಕ ಅಥವಾ ಅಧಿಭೋಗದಾರನು ಅಗತ್ಯಪಡಿಸಿದ ಅವಶ್ಯ ಮಾಹಿತಿಯನ್ನು ಒದಗಿಸಲು ಬದ್ಧನಾಗಿರತಕ್ಕದ್ದು. ಹಾಗೂ ಅಂಥ ಪರಿಶೀಲನೆ ಮತ್ತು ಸಂಗ್ರಹಿಸಿದ ಮಾಹಿತಿಯ ಆಧಾರ ಮೇಲೆ ಅವರು (5)ನೇ ಉಪಪ್ರಕರಣಕ್ಕೆ ಒಳಪಟ್ಟು ಸ್ವತ್ತಿನ ತೆರಿಗೆ ನಿರ್ಧರಣೆ ಮಾಡತಕ್ಕದ್ದು. ಹಾಗೂ ಸಂಬಂಧಪಟ್ಟ ಮಾಲೀಕ ಅಥವಾ ಅಧಿಭೋಗದಾರನಿಗೆ ಆದೇಶದ ಒಂದು ಪ್ರತಿಯನ್ನು ಕಳುಹಿಸತಕ್ಕದ್ದು. ಯಾವುದೇ ಕಟ್ಟಡದ ಅಥವಾ ಖಾಲಿ ಭೂಮಿಯ ಒಳಕ್ಕೆ ಅಥವಾ ಅದರ ಮೇಲೆ ಪ್ರವೇಶವನ್ನು ಸೂರ್ಯೋದಯದಿಂದ ಸೂರ್ಯಾಸ್ತದ ಒಳಗೆ ಮಾಡತಕ್ಕದ್ದು.

(12) ಆವರಣವನ್ನು ಪರಿಶೀಲಿಸಲು ಅಧಿಕೃತ ಅಧಿಕಾರಿಯು ಪ್ರವೇಶಿಸುವುದಕ್ಕೆ ಅವಕಾಶ ನೀಡಲು ಅಧಿಭೋಗದಾರನು ನಿರಾಕರಿಸಿದರೆ ಅಧಿಕಾರಿಯು ಅವನಿಗೆ ಸಮಂಜಸ ಅವಕಾಶವನ್ನು ನೀಡಿದ ತರುವಾಯ ಹಾಗೆ ನಿರಾಕರಿಸಿದ್ದನ್ನು ದಾಖಲಿಸತಕ್ಕದ್ದು ಮತ್ತು ತನ್ನ ಉತ್ತಮ ವಿವೇಚನೆಯ ಪ್ರಕಾರ ಸ್ವತ್ತಿನ ಕರ ನಿರ್ಧರಣೆ ಮಾಡತಕ್ಕದ್ದು:

ಪರಂತು, ವಾಸಕ್ಕಾಗಿ ಬಳಸುತ್ತಿರುವ ಕಟ್ಟಡಗಳ ಸಂದರ್ಭದಲ್ಲಿ ಅಲ್ಲಿ ವಾಸಿಸುತ್ತಿರುವವರ ಸಾಮಾಜಿಕ ಮತ್ತು ಧಾರ್ಮಿಕ ಪದ್ಧತಿಗಳಿಗೆ ತಕ್ಕ ಗೌರವವನ್ನು ನೀಡತಕ್ಕದ್ದು ಮತ್ತು ಹಾಗೆ ವಾಸಿಸುತ್ತಿರುವವರು ಮಹಿಳೆ ಆಗಿದ್ದಲ್ಲಿ ಆಕೆಯು ಆ ಸ್ಥಳದಿಂದ ನಿರ್ಗಮಿಸಲು ಇಚ್ಛಿಸಿದರೆ ಹಾಗೆ ನಿರ್ಗಮಿಸಬಹುದೆಂದು ತಿಳಿಸಿ ಆಕೆ ಹಾಗೆ ನಿರ್ಗಮಿಸಲು ಸಮಂಜಸ ಅವಕಾಶ ನೀಡಿದ ತರುವಾಯ ಮಾತ್ರವೇ ಪ್ರವೇಶಿಸತಕ್ಕದ್ದು.

(13) ಅನಿಶ್ಚಿತ ಆಯ್ಕೆ ಮಾಡಿ ಪರಿಶೀಲಿಸಿದಾಗ ಕರ ನಿರ್ಧರಣೆ ಆಗಿದೆ ಎಂದು ಭಾವಿಸಲಾದ ಯಾವುದೇ ಸಲ್ಲಿಸಿದ ವಿವರ ಪತ್ರವು ಸರಿಯಿಲ್ಲವೆಂದು ಅಥವಾ ಅದರಲ್ಲಿ ಕಡಿಮೆ ಕರ ನಿರ್ಧರಿಸಲಾಗಿದೆಯೆಂದು ತತ್ಪರಿಣಾಮವಾಗಿ ತೆರಿಗೆಯಿಂದ ತಪ್ಪಿಸಿಕೊಳ್ಳಲಾಗಿದೆಯೆಂದು ಅಧಿಕೃತ ಅಧಿಕಾರಿಯು ನಂಬಲು ಕಾರಣಗಳಿದ್ದಲ್ಲಿ,-

(ಎ) ದಾಖಲೆಯಲ್ಲಿ ಲಭ್ಯವಿರುವ ಮಾಹಿತಿಯ ಆಧಾರದ ಮೇಲೆ ಮತ್ತು ವಾಸ್ತವಿಕ ಪರಿಶೀಲನೆಯ ನಂತರ ಈ ಪಕರಣದ ಅಡಿಯಲ್ಲಿ ಉಪಬಂಧಿಸಲಾದ ವಿಧಾನದಲ್ಲಿ ಆ ಸ್ವತ್ತಿನ ಮರು ಕರ ನಿರ್ಧರಣೆ ಮಾಡಲು ತೊಡಗಬಹುದು.

(ಬಿ) ಮರು ಕರ ನಿರ್ಧರಣೆ ಮಾಡಿದ ತೆರಿಗೆಯು ವಿವರಪತ್ರದೊಡನೆ ಸಲ್ಲಿಸಲಾದ ತೆರಿಗೆಯ ಶೇಕಡಾ 5 ಕ್ಕಿಂತಲೂ ಹೆಚ್ಚಾಗಿದ್ದಲ್ಲಿ, ತಪ್ಪಿಸಿಕೊಂಡ ತೆರಿಗೆಯನ್ನು ಹಾಗೆ ತಪ್ಪಿಸಿಕೊಂಡ ತೆರಿಗೆಯ ಎರಡರಷ್ಟಕ್ಕೆ ಸಮನಾದ ಮೊಬಲಗಿಗಿಂತ ಕಡಿಮೆಯಿಲ್ಲದ ದಂಡದೊಡನೆ ಹಾಗೂ ಸಂದಾಯ ಮಾಡಿದ ಹಾಗೂ ಸಂದಾಯ ಮಾಡಬೇಕಾಗಿದ್ದ ತೆರಿಗೆಗಳ ವ್ಯತ್ಯಾಸದ ಮೊಬಲಗಿನ ಮೇಲೆ ವಾರ್ಷಿಕ ಶೇಕಡ 24ರಂತೆ ಲೆಕ್ಕಹಾಕಲಾದ ಬಡ್ಡಿಯೊಡನೆ ಸಂದಾಯಿಸತಕ್ಕದ್ದು;

(ಸಿ) ಆಯುಕ್ತರು ಅಥವಾ ಅಧಿಕೃತ ಅಧಿಕಾರಿಯು ಈ ಪ್ರಕರಣದ ಅಡಿಯಲ್ಲಿ ಹೇಳಲಾದ ರೀತಿಯ ಪರಿಶೀಲನೆ ಅಥವಾ ಮರುನಿರ್ಧರಣೆಯನ್ನು ಮಾಡಿದ ತರುವಾಯ ಮರು ಕರ ನಿರ್ಧರಣೆಯ ಸೂಚನೆಯನ್ನು ಸ್ವೀಕರಿಸಿದ ಮೂವತ್ತು ದಿನಗಳೊಳಗೆ ಲಿಖಿತದಲ್ಲಿ ಅದರ ವಿರುದ್ಧ ಕಾರಣ ತೋರಿಸಲು ತೆರಿಗೆದಾರನಿಗೆ ಒಂದು ಅವಕಾಶವನ್ನು ನೀಡಿದ ತರುವಾಯ ಆ ತೆರಿಗೆಯನ್ನು ಸಂದಾಯ ಮಾಡುವಂತೆ ತಗಾದೆ ಮಾಡಿ ಸೂಚನೆಯನ್ನು ನೀಡತಕ್ಕದ್ದು.

(ಡಿ) ಮಾಲೀಕ ಅಥವಾ ಅಧೀಭೋಗದಾರನು ನಿರ್ಧರಿಸಿದ ಸ್ವತ್ತು ತೆರಿಗೆಯನ್ನು ಮತ್ತು ವಿಧಿಸಿದ ದಂಡವನ್ನು ಒಪ್ಪಿಕೊಳ್ಳಬಹುದು ಅಥವಾ ಈ ಉಪ ಪ್ರಕರಣದ ಅಡಿಯಲ್ಲಿಯ ಸೂಚನೆಯ ಪ್ರತಿಯನ್ನು ಸ್ವೀಕರಿಸಿದ ಮೂವತ್ತು ದಿನಗಳೊಳಗಾಗಿ ಆಯುಕ್ತನಿಗೆ ಅಥವಾ ಅಧಿಕೃತ ಅಧಿಕಾರಿಗೆ ಆಕ್ಷೇಪಣೆಯನ್ನು ಕಳುಹಿಸಬಹುದು;

(ಇ) ಆಯುಕ್ತ ಅಥವಾ ಅಧಿಕೃತ ಅಧಿಕಾರಿಯು ಆಕ್ಷೇಪಣೆಗಳನ್ನು ಪರಿಗಣಿಸತಕ್ಕದ್ದು ಮತ್ತು ಆಕ್ಷೇಪಣೆಗಳನ್ನು ಸಲ್ಲಿಸಿದ ದಿನಾಂಕದಿಂದ ಅರವತ್ತು ದಿನಗಳ ಅವಧಿಯೊಳಗೆ ಅಂಥ ಕರ ನಿರ್ಧರಣೆಯನ್ನು ದೃಢೀಕರಿಸುವ ಅಥವಾ ಪರಿಷ್ಕರಿಸುವ ಆದೇಶವನ್ನು ಹೊರಡಿಸತಕ್ಕದ್ದು ಮತ್ತು ಆದೇಶದ ಒಂದು ಪ್ರತಿಯನ್ನು ಸಂಬಂಧಪಟ್ಟ ಮಾಲೀಕ ಅಥವಾ ಅಧಿಭೋಗದಾರನಿಗೆ ಕಳುಹಿಸತಕ್ಕದ್ದು.

(14) ಈ ಪ್ರಕರಣದ ಅಡಿಯಲ್ಲಿಯ ಕರ ನಿರ್ಧರಣೆ ಅಥವಾ ಮರು ನಿರ್ಧರಣೆಯನ್ನು ಈ ಮುಂದಿನ ಕಾಲಮಿತಿಗಳ ನಂತರ ಮಾಡತಕ್ಕದ್ದಲ್ಲ, ಎಂದರೆ:–

(i) ಈ ಪ್ರಕರಣದ ಅಡಿಯಲ್ಲಿ ತೆರಿಗೆ ವಿವರ ಪತ್ರವನ್ನು ಸಲ್ಲಿಸಿದ ನಂತರ ಮೂರು ವರ್ಷಗಳು ಕಳೆದಮೇಲೆ;

(ii) ಆಯುಕ್ತನು ಅಥವಾ ಅಧಿಕೃತ ಅಧಿಕಾರಿಯ ಅಭಿಪ್ರಾಯದ ಪ್ರಕಾರ ತೆರಿಗೆ ಮರು ನಿರ್ಧರಣೆ ಮಾಡುವುದನ್ನು ಸಮರ್ಥಿಸಲು ವಾಸ್ತವಾಂಶಗಳು ಸಾಕಷ್ಟು ಇವೆ ಎಂಬುದು ಅವರ ಗಮನಕ್ಕೆ ಬಂದ ತರುವಾಯ ಮೂರು ವರ್ಷಗಳು ಕಳೆದ ಮೇಲೆ ಇದರಲ್ಲಿ ಯಾವುದು ನಂತರವೋ ಆ ಅವಧಿ.

(15) ಈ ಅಧಿನಿಯಮದ ಅಡಿಯಲ್ಲಿ ಸಂದರ್ಭಾನುಸಾರ ಕರ ನಿರ್ಧರಣೆಗೆ ಅಥವಾ ತೆರಿಗೆ ಮರು ನಿರ್ಧರಣೆಗೆ ನಿರ್ದಿಷ್ಟಪಡಿಸಿದ ಕಾಲಮಿತಿಯನ್ನು ಲೆಕ್ಕ ಹಾಕುವಾಗ ಕರ ನಿರ್ಧರಣೆ ಅಥವಾ ಇತರ ವ್ಯವಹರಣೆಗಳ ವಿರುದ್ಧ ಸಲ್ಲಿಸಿದ ಯಾವುದೇ ಅಪೀಲಿನ ವಿಲೆಗಾಗಿ ಅಪೀಲು ಪ್ರಾಧಿಕಾರ, ನ್ಯಾಯಾಧಿಕರಣ ಅಥವಾ ಸಕ್ಷಮ ನ್ಯಾಯಾಲಯವು ತೆಗೆದುಕೊಂಡ ಅವಧಿಯನ್ನು  ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ.

(16) (2) ನೇ ಉಪಪ್ರಕರಣಕ್ಕೆ ಒಳಪಟ್ಟು ಈ ಪ್ರಕರಣದ ಅಡಿಯಲ್ಲಿ ನಿರ್ಧರಿಸಿ ವಿಧಿಸಲಾದ ಸ್ವತ್ತು ತೆರಿಗೆಯು 2008–09 ನೇ  ಹಣಕಾಸಿನ ವರ್ಷದಿಂದ ಪ್ರಾರಂಭಿಸಿ ಮೂರು ವರ್ಷಗಳಿಗೆ ಒಂದು ಬಾರಿ ಶೇಕಡಾ 15 ರಷ್ಟು ಹೆಚ್ಚಿಸುವ ಮೂಲಕ ಪರಿಷ್ಕರಣೆಗೆ ಗುರಿಯಾಗತಕ್ಕದ್ದು:

ಪರಂತು, ಪೌರನಿಗಮವು ಅಂಥ ಸ್ವತ್ತು ತೆರಿಗೆಯನ್ನು ಮೂರು ವರ್ಷಗಳಿಗೊಮ್ಮೆ ಶೇಕಡಾ 30ರ ವರೆಗೆ ಹೆಚ್ಚಿಸಬಹುದು. ಮತ್ತು ಬೇರೆ ಬೇರೆ ಪ್ರದೇಶಗಳಿಗೆ ಹಾಗೂ ಬೇರೆ ಬೇರೆ ವರ್ಗದ ಕಟ್ಟಡಗಳು ಮತ್ತು ಭೂಮಿಗಳಿಗೆ ಬೇರೆ ಬೇರೆ ದರಗಳಲ್ಲಿ ತೆರಿಗೆ ಹೆಚ್ಚಿಸಬಹುದು:

ಪರಂತು, ಮೂರು ವರ್ಷಗಳ ಬ್ಲಾಕ್ ಅವಧಿಯಲ್ಲಿ ಈ ಪ್ರಕರಣದ ಅಡಿಯಲ್ಲಿ ಸ್ವತ್ತು ತೆರಿಗೆಯ ನಿರ್ಧರಣೆ ಮಾಡದಿರುವುದು ಯಾವುದೇ ಹೊಸ ಸೇರ್ಪಡೆ, ಬಳಕೆಯ ಬದಲಾವಣೆ, ಆಯ್ಕೆ ಮಾರ್ಪಾಡು ಅಥವಾ ಪರಿವರ್ತನೆ ಮಾಡಿರುವ ಯಾವುದೇ ಕಟ್ಟಡಕ್ಕೆ ಸಂಬಂಧಿಸಿದಂತೆ ಅನ್ವಯವಾಗತಕ್ಕದ್ದಲ್ಲ. ಮಾಲೀಕ ಅಥವಾ ಅಧಿಭೋಗದಾರನು ಅಂಥ ಬದಲಾವಣೆ ಪೂರ್ಣಗೊಂಡ ದಿನಾಂಕ ಅಥವಾ ಅದರ ಅಧಿಬೋಗಕ್ಕೆ ಬಂದ ದಿನಾಂಕ ಇವುಗಳಲ್ಲಿ ಯಾವುದು ಮೊದಲೋ ಆ ದಿನಾಂಕದಿಂದ ಆರು ತಿಂಗಳೊಳಗಾಗಿ ಹಾಗೆ ಬದಲಾವಣೆ ಮಾಡಿರುವುದನ್ನು ಪರಿಷ್ಕೃತ ತೆರಿಗೆ ವಿವರ ಪತ್ರ ಮತ್ತು ತೆರಿಗೆಯೊಡನೆ ವರದಿಯನ್ನು ಮಾಡತಕ್ಕದ್ದು:

ಮತ್ತು ಪರಂತು, ಈ ಪ್ರಕರಣದಲ್ಲಿರುವುದಾವುದೂ ಸ್ವತ್ತು ತೆರಿಗೆಯನ್ನು ಇನ್ನೂ ಮುಂಚಿತವಾಗಿಯೇ ಪರಿಷ್ಕರಿಸುವಂತೆ ನಿರ್ದೇಶನ ನೀಡುವ ರಾಜ್ಯ ಸರ್ಕಾರದ ಅಧಿಕಾರಕ್ಕೆ ಬಾಧಕವಾಗುತ್ತದೆ ಎಂದು ಭಾವಿಸತಕ್ಕದ್ದಲ್ಲ.

(17) ಆಯುಕ್ತರು, ವಲಯಗಳ ವರ್ಗೀಕರಣ, ಘಟಕ ಪ್ರದೇಶ ಮೌಲ್ಯ ಮತ್ತು ಸ್ವತ್ತಿನ ವರ್ಗ ಮುಂತಾದವುಗಳ ಬಗ್ಗೆ ಬರುವ ಯಾವುವೇ ಸಂಶಯಗಳನ್ನು ಪರಿಹರಿಸುವ ಅಧಿಕಾರವನ್ನು ಹೊಂದಿರತಕ್ಕದ್ದು.  ಈ ಸಂಬಂಧದಲ್ಲಿ ಆಯುಕ್ತರ ತೀರ್ಮಾನವು ಅಂತಿಮವಾಗಿರತಕ್ಕದ್ದು."

**4. ನಿರಸನ ಮತ್ತು ಉಳಿಸುವಿಕೆಗಳು:–** (1) ಕರ್ನಾಟಕ ಪೌರ ನಿಗಮಗಳ (ತಿದ್ದುಪಡಿ) ಅಧ್ಯಾದೇಶ, 2008ಅನ್ನು (2008ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 1) ಈ ಮೂಲಕ ನಿರಸನಗೊಳಿಸಲಾಗಿದೆ.

(2) ಹಾಗೆ ನಿರಸನಗೊಳಿಸಿದ್ದಾಗ್ಯೂ, ಸದರಿ ಅಧ್ಯಾದೇಶದ ಮೂಲಕ ತಿದ್ದುಪಡಿ ಮಾಡಲಾದ ಮೂಲ ಅಧಿನಿಯಮದ ಅಡಿಯಲ್ಲಿ ಮಾಡಲಾದ ಯಾವುದೇ ಕಾರ್ಯ ಅಥವಾ ಕೈಗೊಳ್ಳಲಾದ ಯಾವುದೇ ಕ್ರಮವನ್ನು ಈ ಅಧಿನಿಯಮದ ಮೂಲಕ ತಿದ್ದುಪಡಿ ಮಾಡಲಾದ ಮೂಲ ಅಧಿನಿಯಮದ ಅಡಿಯಲ್ಲಿ ಮಾಡಲಾಗಿದೆ ಅಥವಾ ಕೈಗೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ದಿನಾಂಕ 16.1.2007ರಂದು ರಾಜ್ಯ ಸರ್ಕಾರವು ಏಳು ನಗರ ಸಭೆಗಳನ್ನು ಮತ್ತು ಒಂದು ಪುರಸಭೆಯನ್ನು ಹಾಗೂ ಕೆಲವು ಹಳ್ಳಿಗಳನ್ನು ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ವಿಲೀನಗೊಳಿಸಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು ರಚಿಸಿದೆ.  ವಿಲೀನದ ಸಮಯದಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯು ಸ್ವಯಂ ಸ್ವತ್ತು ತೆರಿಗೆ ನಿರ್ಧರಣೆಯ ಅಡಿಯಲ್ಲಿ ವಾರ್ಷಿಕ ಬಾಡಿಗೆ ಮೌಲ್ಯದ ಆಧಾರದ ಮೇಲೆ ಸ್ವತ್ತು ತೆರಿಗೆಯನ್ನು ಸಂಗ್ರಹಿಸುತ್ತಿತ್ತು.  ಏಳು ನಗರ ಸಭೆಗಳು ಮತ್ತು ಒಂದು ಪುರಸಭೆಯು ಸ್ವತ್ತು ತೆರಿಗೆಯನ್ನು ಕರ್ನಾಟಕ ಪುರಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ಬಂಡವಾಳ ಮೌಲ್ಯ ಪದ್ಧತಿಯ ಅಡಿಯಲ್ಲಿ ಸ್ವತ್ತು ತೆರಿಗೆಯನ್ನು ಹಾಗೂ ಕೆಲವು ಹಳ್ಳಿಗಳಲ್ಲಿ ಕರ್ನಾಟಕ ಪಂಚಾಯತ್ ರಾಜ್

ಅಧಿನಿಯಮ, 1993ರ ಅಡಿಯಲ್ಲಿ ಸ್ವತ್ತು ತೆರಿಗೆಯನ್ನು ಸಂಗ್ರಹಿಸಲಾಗುತ್ತಿತ್ತು. ಈಗ ಸದರಿ ವಿಲೀನ ಆಗಿರುವ ಹಿನ್ನೆಲೆಯಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಇದೇ ಪ್ರದೇಶದಲ್ಲಿ ಒಂದೇ ತೆರನಾದ ಸ್ವತ್ತು ತೆರಿಗೆ ನೀತಿಯನ್ನು ತರುವುದು ಅವಶ್ಯವೆಂದು ಅಭಿಪ್ರಾಯ ಪಡಲಾಗಿದೆ.

ಆದ್ದರಿಂದ ಕರ್ನಾಟಕ ಪುರಸಭೆಗಳ ಅಧಿನಿಯಮ, 1976ರಲ್ಲಿ 108ಎ ಹೊಸ ಪ್ರಕರಣವನ್ನು ಸೇರಿಸಿ ಸ್ವತ್ತು ತೆರಿಗೆಯನ್ನು ಘಟಕ ಪ್ರದೇಶ ಮೌಲ್ಯದ ಆಧಾರದ ಮೇಲೆ ಸಂಗ್ರಹಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾಗಿದ್ದರಿಂದ ಮತ್ತು ಕರ್ನಾಟಕ ವಿಧಾನಮಂಡಲದ ಉಭಯ ಸದನಗಳು ಅಧಿವೇಶನದಲ್ಲಿಲ್ಲದಿದ್ದುದರಿಂದ ಕರ್ನಾಟಕ ರಾಜ್ಯಪಾಲರು ಕರ್ನಾಟಕ ಪುರಸಭೆಗಳ (ತಿದ್ದುಪಡಿ) ಅಧ್ಯಾದೇಶ, 2008ನ್ನು (2008ರ ಕರ್ನಾಟಕ ಅಧ್ಯಾದೇಶ ಸಂಖ್ಯೆ:1) ಪ್ರಖ್ಯಾಪಿಸಿರುತ್ತಾರೆ.

ಈ ವಿಧೇಯಕವನ್ನು ಸದರಿ ಅಧ್ಯಾದೇಶದ ಬದಲಿಗೆ ತರಲಾಗಿದೆ.

ಆದ್ದರಿಂದ ಈ ವಿಧೇಯಕ.

**ಕರ್ನಾಟಕ ವಿಧಾನಸಭೆಯ ಕಾರ್ಯವಿಧಾನ ಮತ್ತು ನಡವಳಿಕೆಗಳ ನಿಯಮಗಳ 80ನೇ ನಿಯಮದ (1)ನೇ ಉಪನಿಯಮದ ಮೂಲಕ ಅಗತ್ಯಪಡಿಸಲಾದಂತೆ ವಿವರಣಾತ್ಮಕ ಹೇಳಿಕೆ.**

ದಿನಾಂಕ 16.1.2007ರಂದು ರಾಜ್ಯ ಸರ್ಕಾರವು ಏಳು ನಗರ ಸಭೆಗಳನ್ನು ಮತ್ತು ಒಂದು ಪುರಸಭೆಯನ್ನು ಹಾಗೂ ಕೆಲವು ಹಳ್ಳಿಗಳನ್ನು ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ವಿಲೀನಗೊಳಿಸಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯನ್ನು ರಚಿಸಿದೆ. ವಿಲೀನದ ಸಮಯದಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯು ಸ್ವಯಂ ಸ್ವತ್ತು ತೆರಿಗೆ ನಿರ್ಧರಣೆಯ ಅಡಿಯಲ್ಲಿ ವಾರ್ಷಿಕ ಬಾಡಿಗೆ ಮೌಲ್ಯದ ಆಧಾರದ ಮೇಲೆ ಸ್ವತ್ತು ತೆರಿಗೆಯನ್ನು ಸಂಗ್ರಹಿಸುತ್ತಿತ್ತು. ಏಳು ನಗರ ಸಭೆಗಳು ಮತ್ತು ಒಂದು ಪುರಸಭೆಯು ಸ್ವತ್ತು ತೆರಿಗೆಯನ್ನು ಕರ್ನಾಟಕ ಪುರಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ಬಂಡವಾಳ ಮೌಲ್ಯ ಪದ್ಧತಿಯ ಅಡಿಯಲ್ಲಿ ಸ್ವತ್ತು ತೆರಿಗೆಯನ್ನು ಹಾಗೂ ಕೆಲವು ಹಳ್ಳಿಗಳಲ್ಲಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಅಡಿಯಲ್ಲಿ ಸ್ವತ್ತು ತೆರಿಗೆಯನ್ನು ಸಂಗ್ರಹಿಸಲಾಗುತ್ತಿತ್ತು. ಈಗ ಸದರಿ ವಿಲೀನ ಆಗಿರುವ ಹಿನ್ನೆಲೆಯಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಇದೇ ಪ್ರದೇಶದಲ್ಲಿ ಒಂದೇ ತೆರನಾದ ಸ್ವತ್ತು ತೆರಿಗೆ ನೀತಿಯನ್ನು ತರುವುದು ಅವಶ್ಯವೆಂದು ಅಭಿಪ್ರಾಯ ಪಡಲಾಗಿದೆ.

ಆದ್ದರಿಂದ ಕರ್ನಾಟಕ ಪುರಸಭೆಗಳ ಅಧಿನಿಯಮ, 1976ರಲ್ಲಿ 108ಎ ಹೊಸ ಪ್ರಕರಣವನ್ನು ಸೇರಿಸಿ ಸ್ವತ್ತು ತೆರಿಗೆಯನ್ನು ಘಟಕ ಪ್ರದೇಶ ಮೌಲ್ಯದ ಆಧಾರದ ಮೇಲೆ ಸಂಗ್ರಹಿಸುವುದಕ್ಕಾಗಿ ಉಪಬಂಧ ಕಲ್ಪಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ವಿಷಯವು ತುರ್ತು ಸ್ವರೂಪದ್ದಾಗಿದ್ದರಿಂದ ಮತ್ತು ಕರ್ನಾಟಕ ವಿಧಾನಮಂಡಲದ ಉಭಯ ಸದನಗಳು ಅಧಿವೇಶನದಲ್ಲಿಲ್ಲದಿದ್ದುದರಿಂದ ಕರ್ನಾಟಕ ರಾಜ್ಯಪಾಲರು ಕರ್ನಾಟಕ ಪುರಸಭೆಗಳ (ತಿದ್ದುಪಡಿ) ಅಧ್ಯಾದೇಶ, 2008ನ್ನು (2008ರ ಕರ್ನಾಟಕ ಅಧ್ಯಾದೇಶ ಸಂಖ್ಯೆ:1) ಪ್ರಖ್ಯಾಪಿಸಿರುತ್ತಾರೆ.

ಈ ವಿಧೇಯಕವನ್ನು ಸದರಿ ಅಧ್ಯಾದೇಶದ ಬದಲಿಗೆ ತರಲಾಗಿದೆ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಜ್ಞಾಪನ ಪತ್ರ**

**ಖಂಡ 3:** 3ನೇ ಖಂಡದ ಮೂಲಕ ಸೇರಿಸಲು ಉದ್ದೇಶಿಸಿದ 108ಎ ಪ್ರಕರಣವು ಬೃಹತ್ ಬೆಂಗಳೂರು ನಗರ ಪಾಲಿಕೆಯ ಸಂಬಂಧದಲ್ಲಿ ಈ ಮುಂದಿನ ವಿಷಯಗಳಿಗೆ ಸಂಬಂಧಪಟ್ಟಂತೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ:–

(i) ಬೆಂಗಳೂರು ನಗರ ಪಾಲಿಕೆಯು ಸ್ವತ್ತು ತೆರಿಗೆಯ ನಿರ್ಧರಣೆಯ ಸಂಬಂಧದಲ್ಲಿ ನಮೂನೆ ಅಥವಾ ರಿಜಿಸ್ಟರ್ ಇವುಗಳ ಬಗ್ಗೆ ಪ್ರತ್ಯೇಕ ವಿಧಾನ.

(ii) ಮಾಲೀಕರು ಸಲ್ಲಿಸಬೇಕಾದ ವಿವರಣಾ ಪಟ್ಟಿಕೆಯ ನಮೂನೆ ಮತ್ತು ವಿಧಾನ ಹಾಗೂ ಸಂದಾಯ ಮಾಡಬೇಕಾದ ಹೊಣೆಗಾರಿಕೆ.

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಬಿ.ಎಸ್. ಯಡಿಯೂರಪ್ಪ**
ಮುಖ್ಯಮಂತ್ರಿಗಳು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**ತಿದ್ದೋಲೆ**

ಕರ್ನಾಟಕ ಪೌರ ನಿಗಮಗಳ (ತಿದ್ದುಪಡಿ) ವಿಧೇಯಕ 2009ರ (2009ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 7) 1ನೇ ಖಂಡದ (2)ನೇ ಉಪ ಖಂಡದಲ್ಲಿ

| ಎಂಬುದನ್ನು | ಎಂದು ಓದಿಕೊಳ್ಳತಕ್ಕದ್ದು |
|---|---|
| (2) ಇದು ಕರ್ನಾಟಕ ಪೌರ ನಿಗಮಗಳ (ತಿದ್ದುಪಡಿ) ಅಧ್ಯಾದೇಶ 2008 (2008ರ ಕರ್ನಾಟಕ ಅಧ್ಯಾದೇಶ ಸಂಖ್ಯೆ 1) ಜಾರಿಗೆ ಬಂದ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು. | (2) ಇದು 2009ರ ಜನವರಿ 13ನೇ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು. |

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY**
**THIRTEENTH LEGISLATIVE ASSEMBLY**

**SECOND SESSION**

## THE KARNATAKA MUNICIPAL CORPORATIONS (AMENDMENT) BILL, 2009

**(L.A. Bill No. 7 of 2009)**

A Bill further to amend the Karnataka Municipal Corporations Act, 1976.

Whereas it is expedient further to amend the Karnataka Municipal Corporations Act, 1976 (Karnataka Act 14 of 1977) for the purposes hereinafter appearing;

Be it enacted by the Karnataka State Legislature in the fifty-ninth year of the Republic of India, as follows:-

**1. Short title and commencement.-** This Act, may be called the Karnataka Municipal Corporations (Amendment) Act, 2009.

(2) It shall be deemed to have come into force with effect from the date of commencement of the Karnataka Municipal Corporations (Amendment) Ordinance, 2008 (Karnataka Ordinance 1 of 2008).

**2. Amendment of Section 3.**- In section 3 of the Karnataka Municipal Corporations Act, 1976 (Karnataka Act 14 of 1977) (hereinafter referred to as the principal Act), after sub-section (2) the following shall be inserted namely:-

Provided that the "Corporation of City of Bangalore" shall be called the "Bruhat Bangalore Mahanagara Palike".

**3. Insertion of new section 108A.-** After section 108 of the principal Act, the following new section shall be inserted, namely:-

**"108A. Levy and calculation of property tax in respect of Bruhath Bangalore Mahanagara Palike.-** (1) Notwithstanding anything contrary contained in this Act, subject to such exemptions provided under this Act and such rules as may be prescribed, the property tax of all buildings or vacant lands or both situated within the city of Bruhath Bangalore Mahanagara Palike area shall be levied every year in the following manner.

(2) The property tax shall be levied by the Bruhath Bangalore Mahanagara Palike by resolution passed as specified in section 106 at such percentage not being less than 20 percent and not more than 25 percent of the taxable annual value of a building, vacant land or both. The taxable annual value of a building, vacant land or both shall be calculated by multiplying the corresponding "unit area value" with the total built-up area of a building, vacant land or both for ten months, minus depreciation at such rate, as may be prescribed, depending on the age of a building.

**Explanation.-** For the purpose of this section, "Unit Area Value" means an average rate of expected returns from the property per sq.ft., per month determined by the Commissioner, Bruhath Bangalore Mahanagara Palike on the basis of the average market rate determined through mass appraisal method or real estate market information or any other reliable source or combination of these sources that he may considers it as sufficient and reasonable having regard to the location, type of construction of the building, nature of use to which the vacant land or building is put, area of the vacant land, built-up area of the building, age of the building, parking area of vehicles in non-residential building where it is charged and such other criteria as may be prescribed. Different rates may be determined for different area or street by classifying into zones, different nature of use to which the vacant land or building is put and for different class of buildings and vacant lands:

Provided that no such "unit area value" shall come into force unless it is previously published in the official Gazette for the information of the persons likely to be affected and an opportunity is provided to make representation or suggestions, if any, in this regard:

Provided further that the land appurtenant to a building to the extent not exceeding thrice the area occupied by such building shall be exempted from the property tax:

Provided also that subject to such condition and in such circumstances as may be notified, the Commissioner, Bruhath Bangalore Mahanagara Palike, may, in lieu of the tax under sub-section (2), fix any lumpsum amount as annual tax, irrespective of zonal classification, in respect of,-

(a) a built-up area having less than 300 sq.ft., in a slum area declared as such by the Karnataka Slum Clearance Board or the Commissioner, Bruhath Bangalore Mahanagara Palike; and

(b) an area used as parking area in a non-residential building and being charged for its use by the owner or the occupier.

(c) any other class of building or structure as he deems fit.

(3) The Bruhath Bangalore Mahanagara Palike may levy and collect the property tax from every building, vacant land or both including a building constructed in violation of the provisions of building byelaw or in an unauthorized layout or in a revenue land or from a building occupied without issuance of occupancy or completion certificate except the building constructed illegally in Government land, land belonging to any local body, any statutory body or an organization owned or controlled by the Government. The property tax collected from such building shall be maintained in a separate register:

Provided that levy and collection of property tax under this sub-section from such building does not confer any right to regularise violation made, or title, ownership or legal status to such building. Such buildings shall always be liable for any action for violation of law in accordance with the provisions of this Act or any other law.

(4) The property tax payable shall be reduced by fifty percent in respect of a self occupied building used for residential purpose and such class of self occupied non-residential building as may be notified by the State Government on the recommendation of the Corporation.

(5) The provisions contained in sections 107, 110, 111, 112, sub-sections (5), (6) and (7) of section 112A, and sections 112B, 112D and 113 to the extent they are not inconsistent to the provisions of this section shall mutatis mutandis apply to the Bruhath Bangalore Mahanagara Palike:

Provided that the State Government may prescribe separate procedure, form or register in respect of property assessed by the Bruhath Bangalore Mahanagara Palike. A different register may be prescribed for different class of property assessed for tax.

(6) The person primarily liable to pay the property tax, shall pay the tax in two equal instalments. The first being before 30th May and second by 29th November of each financial year. However, the owner or occupier or person primarily liable to pay property tax may choose to pay in one instalment:

Provided that for the year 2008-09, the first instalment shall be paid within sixty days from the date of commencement of the Karnataka Municipal Corporations (Amendment) Act, 2009 and the second instalment shall be paid within thirty days thereafter:

Provided further that if the owner or occupier who is liable to pay property tax files return and also pays property tax for the whole year, within one month from the date of commencement of each year or within one month or within one month from the date of commencement of the Karnataka Municipal Corporations (Amendment) Act, 2009 for the year 2008-09, he shall be allowed a rebate of five per cent on the tax payable by him:

Provided also that the State Government may on the recommendation of the Corporation by notification extend the time limit for payment of property tax without penalty and for the benefit of 5% rebate in respect of the financial year 2008-09 and 2009-2010.

Provided also that subject to random scrutiny as may be prescribed, the tax return filed for the first time during 2008-09 shall form the base for payment of tax applicable during each block year.

(7) Before any owner or occupier submits any return under sub-section (8), he shall pay in advance half-yearly tax calculated or the full amount of the property tax payable by him for the year on the basis of such return declared by him as being true and complete.

(8) Notwithstanding anything contained in sub-section (1) of section 112A, the State Government may prescribe the form and the manner in which every owner or occupier who is liable to pay the property tax under this Act shall submit a return every year to the Commissioner, Bruhath Bangalore Mahanagara Palike or to the officer or agency authorized by him in this behalf.

(9) In order to facilitate filing of return by an owner or occupier of any building or vacant land or both and assessment of property tax under this section, the Commissioner shall from time to time issue guidelines for determining the unit area value and property tax payable thereon.

(10) Every return filed by a owner or occupier shall be deemed to have been assessed to tax except in cases where the Commissioner or authorised officer may take-up or authorise subordinate officers the cases for random scrutiny of the returns filed in the manner prescribed.

Provided that Commissioner may suo moto or otherwise has reason to believe that there is an evasion of tax by the owner or occupier, he may cause inspection of such building and assess the tax.

(11) For the purpose of random scrutiny of the return filed or in cases where returns are not filed as required under sub-section (8) in respect of any buildings or lands or both, the Commissioner or any person authorized by him in this behalf may enter, inspect, survey or measure any land or building after giving notice to the owner or occupier and the owner or occupier shall be bound to furnish necessary information required and based on such inspection and information collected, he shall assess the property tax subject to sub-section (5) and send a copy of the order of assessment to the owner or occupier concerned. Such entry into and upon any building or vacant land shall be made between sunrise and sunset.

(12) If the occupier of the property, refuses to allow the authorised officer to enter to inspect the premises, the officer after giving reasonable opportunity shall record the refusal and shall proceed to assess the property to the best of his judgement:

Provided that in the case of buildings used as human dwelling due regard shall be paid to the social and religious customs of the occupiers and no apartment in the actual occupancy of a woman shall be entered until she has been informed that she is at liberty to withdraw and every reasonable facility has been afforded to her for withdrawing.

(13) Upon random scrutiny, if the authorized officer has reasons to believe that any return furnished, which is deemed as assessed, is incorrect or has been underassessed resulting in evasion of property tax,-

(a) may, on the basis of information available on record and after physical inspection proceed to re-assess the property, in the manner provided under this section;

(b) if the tax-reassessed is more than 5 percent than the tax remitted alongwith the returns, the evaded tax shall be payable together with a penalty not less than twice the tax so evaded payable alongwith interest for the difference in tax paid and payable calculated at 24 percent per annum;

(c) if upon inspection and re-assessment as made under this section by the Commissioner or the authorized officer, shall issue a notice of re-assessment to the tax payer demanding that the tax shall be paid within thirty days of the service of the notice and after giving the tax payer the opportunity of show cause in writing;

(d) the owner or occupier may either accept the property tax assessed and the penalty levied or send objections to the Commissioner or the authorized officer within a period of thirty days from the date of receipt of a copy of the notice under this sub-section;

(e) the Commissioner or the authorized officer shall consider the objections and pass such orders either confirming or revising such assessment within a period of sixty days from the date of filing objections and a copy of the order shall be sent to the owner or occupier concerned.

(14) An assessment or re-assessment under this section shall not be made after the following time limits,-

(i) three years after filing the tax return under this section;

(ii) three years after the evidence of facts, sufficient in the opinion of the Commissioner or the authorized officer to justify making of the re-assessment, comes to its knowledge, whichever is later.

(15) In computing the period of limitation specified for assessment or re-assessment, as the case may be under this Act, the period taken for disposal of any appeal against an assessment or other proceedings by the appellate authority, a tribunal or competent court shall not be taken into account for assessment or re-assessment as the case may be.

(16) Subject to sub-section (2), the property tax assessed and levied under this section shall be liable for revision once in three years by enhancing 15 percent commencing from the financial year 2008-09:

Provided that the Municipal Corporation may enhance such property tax upto 30 percent once in three years and different rates of enhancement may be made to different areas and different classes of buildings and lands:

Provided further that the non-assessment of property tax under this section during the block period of three years shall not be applicable to a building in respect of which there is any addition, change of use, alteration or variation to it. The owner or occupier shall report such changes within six months from the date of completion or occupation whichever is earlier alongwith the revised return and tax:

Provided also that nothing contained in this section shall be deemed to affect the power of State Government to direct an earlier revision of property tax.

(17) The Commissioner shall have power to clarify any doubt as to classification of zones, unit area value and class of property. The decision of the Commissioner in this regard shall be final."

**3. Repeal and savings.-** (1) The Karnataka Municipal Corporations (Amendment) Ordinance, 2008 ( Karnataka Ordinance No.1 of 2008 ) is hereby repealed.

(2) Notwithstanding such repeal anything done or any action taken under the principal Act as amended by the said ordinance, shall be deemed to have been done or taken under the principal Act as amended by this Act.

**STATEMENT OF OBJECTS AND REASONS**

The State Government constituted the Bruhat Bangalore Mahanagara Palike on 16-1-2007 by merging of Seven City Municipal Councils and One Town Municipal Council and certain villages with the Bangalore Mahanagara Palike. At the time of merger, Bangalore Mahanagara Palike was collecting property tax on the basis of Annual Rental Value under the optional Self Assessment System. Whereas seven City Municipal Councils and one Town Municipal Council were collecting tax under capital value system under the provisions of the Karnataka Municipalities Act, 1964 and the villages were collecting tax under the Karnataka Panchayat Raj Act, 1993. In view of the merger it is felt necessary to bring in a uniform property tax policy in the entire Bruhat Bangalore Mahanagara Palike area.

Therefore it is considered necessary to amend the Karnataka Municipal Corporations Act, 1976 by inserting a new section 108A, to provide for collection of property tax on the basis of unit area value.

As the matter was urgent, and both the Houses of the Karnataka State Legislature were not in session, the Governor of Karnataka has promulgated the Karnataka Municipal Corporations (Amendment) Ordinance, 2008 (Karnataka Ordinance 1 of 2008)

This Bill seeks to replace the said ordinance.

Hence, this Bill.

**Explanatory statement as required under sub-rule (1) of rule 80 of the Procedure and Conduct of Business Rules of the Karnataka Legislative Assembly.**

The State Government constituted the Bruhat Bangalore Mahanagara Palike on 16-1-2007 by merging Seven City Municipal Councils and One Town Municipal Council and certain villages with the Bangalore Mahanagara Palike. At the time of merger, the Bangalore Mahanagara Palike was collecting property tax on the basis of Annual Rental Value under the optional Self Assessment System. Whereas Seven City Municipal Councils and one Town Municipal Council were collecting tax under capital value system under the provisions of the Karnataka Municipalities Act, 1964 and the villages were collecting tax under the Karnataka Panchayat Raj Act, 1993. In view of the merger it is felt necessary to bring in a uniform property tax policy in the entire Bruhat Bangalore Mahanagara Palike area.

Therefore it is considered necessary to amend the Karnataka Municipal Corporations Act, 1976 by inserting a new section 108A. to provide for collecting of property tax on the basis of unit area value.

As the matter was urgent, and both the Houses of the Karnataka State Legislature were not in session, the Governor of Karnataka has promulgated the Karnataka Municipal Corporations (Amendment) Ordinance, 2008 (Karnataka Ordinance 1 of 2008)

**FINANCIAL MEMORANDUM**

There is no extra expenditure involved in the proposed measure.

**Memorandum regarding delegated legislation**

Clause 3 section 108A sought to be inserted by clause 3 empowers the State Government to make rules with respect to Bruhat Bangalore Mahanagara Palike , regarding.-

(i) separate procedure form or register by Bruhat Bangalore Mahanagara Palike in respect property assessed property tax;

(ii) the form and the manner of returns in which to submit property owners and liable to pay.

The proposed delegation of legislative power is normal in character.

**B.S. YEDDYURAPPA**
Chief Minister

**S.B. PATIL**
Secretary
Karnataka Legislative Assembly

**CORRIGENDUM**

In the Karnataka Municipal Corporations (Amendment) Bill, 2009 (LA Bill No. 7 of 2009) **in Clause 1, in sub-clause (2).**

| FOR | READ |
|---|---|
| (2) It shall be deemed to have come into force with effect from the date of commencement of the Karnataka Municipal Corporations (Amendment) Ordinance, 2008 (Karnataka Ordinance 1 of 2008). | (2) It shall be deemed to have come into force with effect from 13th day of January, 2009. |

**S.B. PATIL**

Secretary

Karnataka Legislative Assembly

ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಜನವರಿ ೨೧, ೨೦೦೯ (ಮಾಘ ೧, ಶಕ ವರ್ಷ ೧೯೩೦) | ನಂ. ೩೩ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. LGA/BLA/8/2009, Bangalore, Camp: Belagavi, Dated : 21st January, 2009**

The following Bill was introduced in Legislative Assembly on 21.1.2009.

**THE KARNATAKA STATE LAW UNIVERSITY BILL, 2009**

**(L.A. Bill No. 8 of 2009)**

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನಸಭೆ**

**ಎರಡನೇ ಅಧಿವೇಶನ**

**ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ವಿಧೇಯಕ, 2009**

**(2009ರ ವಿಧಾನಸಭೆಯ ವಿಧೇಯಕ ಸಂಖ್ಯೆ 08)**

ಕರ್ನಾಟಕ ರಾಜ್ಯದಲ್ಲಿ ಕಾನೂನಿನ ಕ್ಷೇತ್ರದ ಅಧ್ಯಯನ ಮತ್ತು ಸಂಶೋಧನೆಗಾಗಿ ಮುಡಿಪಾದ ಒಂದು ಕಾನೂನು ವಿಶ್ವವಿದ್ಯಾಲಯವನ್ನು ಸ್ಥಾಪಿಸಲು ಮತ್ತು ನಿಗಮಿತಗೊಳಿಸಲು ಒಂದು ವಿಧೇಯಕ.

ಕರ್ನಾಟಕ ರಾಜ್ಯದಲ್ಲಿ, ಕಾನೂನಿನ ವ್ಯವಸ್ಥಿತ ಶಿಕ್ಷಣ, ಬೋಧನೆ, ತರಬೇತಿಗಳ ಮೂಲಕ ಕಾನೂನಿನ ಅಧ್ಯಯನ ಮತ್ತು ಸಂಶೋಧನೆ ನಡೆಸುವುದಕ್ಕೆ ಮತ್ತು ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರಜೆಗಳಲ್ಲಿ ಕಾನೂನಿನ ಬಗ್ಗೆ ಅರ್ಥಪೂರ್ಣ ಕಾಳಜಿಯನ್ನು ಮೈಗೂಡಿಸುವುದಕ್ಕೆ ಮುಡಿಪಾದ ವಿಶ್ವವಿದ್ಯಾಲಯವೊಂದನ್ನು ಸ್ಥಾಪಿಸುವುದು ಮತ್ತು ನಿಗಮಿತಗೊಳಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಐವತ್ತೊಂಬತ್ತನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

## ಅಧ್ಯಾಯ – I

### ಪ್ರಾರಂಭಿಕ

1. **ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ***ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ಅಧಿನಿಯಮ, 2009*** ಎಂದು ಕರೆಯತಕ್ಕದ್ದು.

(2) ಇದು, 2009ರ ಜನವರಿ 1ನೇ ದಿನಾಂಕದಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು.

2. **ಪರಿಭಾಷೆಗಳು.**– ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಪ್ರಶಿಕ್ಷಣ ಪರಿಷತ್ತು (ಅಕೆಡೆಮಿಕ್ ಕೌನ್ಸಿಲ್)" ಎಂದರೆ, 33ನೇ ಪ್ರಕರಣದಡಿಯಲ್ಲಿ ಸ್ಥಾಪಿಸಲಾದ ವಿಶ್ವವಿದ್ಯಾಲಯದ ಪ್ರಶಿಕ್ಷಣ ಪರಿಷತ್ತು ;

(ಬಿ) "ಸಂಯೋಜಿತ ಕಾಲೇಜು" ಎಂದರೆ, ವಿಶ್ವವಿದ್ಯಾಲಯ ಪ್ರದೇಶದೊಳಗೆ ಇರುವ ಮತ್ತು ನಿಯಮಿಸಲಾದ ಶಾಸನಗಳ ಅನುಸಾರ ವಿಶ್ವವಿದ್ಯಾಲಯಕ್ಕೆ ಸಂಯೋಜಿತವಾದ ಒಂದು ಕಾಲೇಜು ಅಥವಾ ಸಂಸ್ಥೆ ಮತ್ತು ಇದರಲ್ಲಿ ಈ ಅಧ್ಯಾದೇಶದ ಅಡಿಯಲ್ಲಿ ವಿಶ್ವವಿದ್ಯಾಲಯಕ್ಕೆ ಸಂಯೋಜಿತವಾಗಿವೆ ಎಂದು ಭಾವಿಸಲಾದ ಕಾನೂನು ಶಿಕ್ಷಣವನ್ನು ನೀಡುವ ಎಲ್ಲ ಕಾಲೇಜುಗಳು ಮತ್ತು ಸಂಸ್ಥೆಗಳು ಒಳಗೊಳ್ಳುತ್ತವೆ;

(ಸಿ) "ವಿಚಾರಣಾ ಆಯೋಗ" ಎಂದರೆ, 8ನೇ ಪ್ರಕರಣದ ಅಡಿಯಲ್ಲಿ ರಚಿಸಲಾದ ವಿಚಾರಣಾ ಆಯೋಗ;

(ಡಿ) "ಕಾಲೇಜು" ಎಂದರೆ, ರಾಜ್ಯ ಸರ್ಕಾರವು ಮಾನ್ಯತೆ ನೀಡಿದ ಮತ್ತು ವಿಶ್ವವಿದ್ಯಾಲಯಕ್ಕೆ ಸಂಯೋಜಿತವಾದ ಮತ್ತು ವಿಶ್ವವಿದ್ಯಾಲಯದ ಪದವಿಗಳು, ಡಿಪ್ಲೋಮಾಗಳು ಅಥವಾ ಇತರ ವಿದ್ಯಾಪ್ರಶಸ್ತಿಗಳನ್ನು ದೊರಕಿಸಿಕೊಡುವ

ಪರೀಕ್ಷೆಗಳ ಪ್ರವೇಶಕ್ಕೆ ಬೇಕಾದ ಕಾನೂನಿನ ಯಾವುದೇ ವ್ಯಾಸಂಗಕ್ರಮ ಮತ್ತು ತರಬೇತಿಯನ್ನು ಒದಗಿಸುವ ಒಂದು ಕಾಲೇಜು ಅಥವಾ ಒಂದು ಸಂಸ್ಥೆ;

(ಇ) "ವಿಭಾಗ", "ಅಧ್ಯಯನಗಳ ವಿಭಾಗ", "ಸ್ನಾತಕೋತ್ತರ ಪದವಿ ವಿಭಾಗ" ಮತ್ತು "ಅಧ್ಯಯನಗಳ ಸ್ನಾತಕೋತ್ತರ ಪದವಿ ವಿಭಾಗ" ಎಂದರೆ, ಈ ಅಧಿನಿಯಮದ ಅಡಿಯಲ್ಲಿನ ವಿಶ್ವವಿದ್ಯಾಲಯವು ಸ್ಥಾಪಿಸಿ ನಿರ್ವಹಿಸುತ್ತಿರುವ ವಿಶ್ವವಿದ್ಯಾಲಯದಲ್ಲಿನ ಅನುಕ್ರಮವಾಗಿ ವಿಭಾಗ, ಅಧ್ಯಯನಗಳ ವಿಭಾಗ, ಸ್ನಾತಕೋತ್ತರ ಪದವಿ ವಿಭಾಗ ಮತ್ತು ಅಧ್ಯಯನಗಳ ಸ್ನಾತಕೋತ್ತರ ಪದವಿ ವಿಭಾಗ;

(ಎಫ್) "ಸರ್ಕಾರ" ಎಂದರೆ, ರಾಜ್ಯ ಸರ್ಕಾರ;

(ಜಿ)"ವಿದ್ಯಾರ್ಥಿನಿಲಯ" ಎಂದರೆ, ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಅಥವಾ ಅದರಿಂದ ಮನ್ನಣೆ ಪಡೆದ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ಇರುವ ವಾಸಸ್ಥಳ ಘಟಕ;

(ಎಚ್) "ನಿಯಮಿಸಲಾದುದು" ಎಂದರೆ, ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಶಾಸನಗಳು, ಪರ್ಯಾದೇಶಗಳು, ಅಥವಾ ವಿನಿಯಮಗಳ ಮೂಲಕ ನಿಯಮಿಸಲಾದುದು;

(ಐ) "ಪ್ರಾಚಾರ್ಯ (ಪ್ರಿನ್ಸಿಪಾಲ್)" ಎಂದರೆ, ಕಾಲೇಜಿನ ಅಥವಾ ಸಂಸ್ಥೆಯ ಮುಖ್ಯಸ್ಥ;

(ಜೆ) "ಶಾಸನಗಳು", "ಪರ್ಯಾದೇಶಗಳು", "ವಿನಿಯಮಗಳು" ಎಂದರೆ, ಅನುಕ್ರಮವಾಗಿ ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಶಾಸನಗಳು, ಪರ್ಯಾದೇಶಗಳು, ವಿನಿಯಮಗಳು;

(ಕೆ) "ಪ್ರಶಾಸನ ಸಭೆ (ಸಿಂಡಿಕೇಟ್)" ಎಂದರೆ, 29ನೇ ಪ್ರಕರಣದಡಿಯಲ್ಲಿ ಸ್ಥಾಪಿಸಲಾದ ವಿಶ್ವವಿದ್ಯಾಲಯದ ಪ್ರಶಾಸನ ಸಭೆ;

(ಎಲ್) "ಅಧ್ಯಾಪಕರು" ಎಂಬುದರಲ್ಲಿ, ಸಂದರ್ಭಾನುಸಾರ ವಿಶ್ವವಿದ್ಯಾಲಯದಲ್ಲಿ, ಕಾಲೇಜಿನಲ್ಲಿ, ಅಥವಾ ಇತರ ಸಂಸ್ಥೆಯಲ್ಲಿ ಶಿಕ್ಷಣವನ್ನು ನೀಡುತ್ತಿರುವ ಈ ಅಧಿನಿಯಮದ ಅಡಿಯಲ್ಲಿನ ವಿಶೇಷಾಧಿಕಾರಗಳ ಸೌಲಭ್ಯ ಪಡೆದಂಥ ಪ್ರಾಧ್ಯಾಪಕರು, ಪ್ರವಾಚಕರು, ಪೂರ್ಣಕಾಲಿಕ ಅಥವಾ ಅರೆಕಾಲಿಕ ಉಪನ್ಯಾಸಕರು, ಹಿರಿಯ ಶ್ರೇಣಿ ಉಪನ್ಯಾಸಕರು, ಆಯ್ಕೆ ಶ್ರೇಣಿ ಉಪನ್ಯಾಸಕರು ಇವರು ಒಳಗೊಂಡಿರುತ್ತಾರೆ;

(ಎಂ) "ವಿಶ್ವವಿದ್ಯಾಲಯ" ಎಂದರೆ, 3ನೇ ಪ್ರಕರಣದ ಅಡಿಯಲ್ಲಿ ಸ್ಥಾಪಿಸಿ ನಿಗಮಿತಗೊಳಿಸಲಾದ ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ;

(ಎನ್) "ವಿಶ್ವವಿದ್ಯಾಲಯ ಪ್ರದೇಶ" ಎಂದರೆ, ವಿಶ್ವವಿದ್ಯಾಲಯದ ಅಧಿಕಾರ ವ್ಯಾಪ್ತಿಯೊಳಗಿನ ಪ್ರದೇಶ;

(ಓ) "ವಿಶ್ವವಿದ್ಯಾಲಯ ಕಾಲೇಜು" ಎಂದರೆ, ವಿಶ್ವವಿದ್ಯಾಲಯವು ಸ್ಥಾಪಿಸಿರುವ, ನಿರ್ವಹಿಸುತ್ತಿರುವ ಮತ್ತು ಅದಕ್ಕೆ ಸಂಯೋಜಿತವಾಗಿರುವ ಒಂದು ಕಾಲೇಜು;

## ಅಧ್ಯಾಯ – II

## ವಿಶ್ವವಿದ್ಯಾಲಯ

**3. ವಿಶ್ವವಿದ್ಯಾಲಯದ ಸ್ಥಾಪನೆ ಮತ್ತು ನಿಗಮನ.–** (1) 4ನೇ ಪ್ರಕರಣದಲ್ಲಿ ಹೇಳಿದ ಧ್ಯೇಯೋದ್ದೇಶಗಳನ್ನು ಸಾಧಿಸುವುದಕ್ಕಾಗಿ "ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ" ಎಂಬ ಹೆಸರಿನ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸತಕ್ಕದ್ದು.

(2) ವಿಶ್ವವಿದ್ಯಾಲಯವು ಶಾಶ್ವತ ಉತ್ತರಾಧಿಕಾರ ಹಾಗೂ ಸಾಮಾನ್ಯ ಮೊಹರನ್ನು ಹೊಂದಿರುವ ಚರ ಹಾಗೂ ಸ್ಥಿರ ಸ್ವತ್ತುಗಳೆರಡನ್ನೂ ಆರ್ಜಿಸುವ, ಧಾರಣ ಮಾಡುವ ಮತ್ತು ವಿಲೆ ಮಾಡುವ ಅಧಿಕಾರ ಹೊಂದಿರತಕ್ಕ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಅದು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೊಳಗಾಗತಕ್ಕದ್ದು.

(3) ವಿಶ್ವವಿದ್ಯಾಲಯದ ಕೇಂದ್ರ ಕಾರ್ಯಸ್ಥಾನವು **ಹುಬ್ಬಳ್ಳಿಯ ರಾಯಪುರ ಗ್ರಾಮದಲ್ಲಿರತಕ್ಕದ್ದು** ಮತ್ತು ಅದು ಸೂಕ್ತವೆಂದು ಮತ್ತು ಸಮುಚಿತವೆಂದು ಭಾವಿಸಬಹುದಾದಂತಹ ರಾಜ್ಯದೊಳಗಿನ ಇತರ ಸ್ಥಳಗಳಲ್ಲಿ ಸರ್ಕಾರದ ಪೂರ್ವಾನುಮತಿಯೊಂದಿಗೆ ಪ್ರಾದೇಶಿಕ ಕೇಂದ್ರಗಳನ್ನು ಸ್ಥಾಪಿಸಿರತಕ್ಕದ್ದು.

(4) ವಿಶ್ವವಿದ್ಯಾಲಯವು ಬೋಧಿಸುವ ಮತ್ತು ಸಂಯೋಜನೆ ಮಾಡಿಕೊಳ್ಳುವ ವಿಶ್ವವಿದ್ಯಾಲಯವಾಗಿರತಕ್ಕದ್ದು.

**4. ಧ್ಯೇಯೋದ್ದೇಶಗಳು.-** (1) ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳು ವಾಡಿಕೆಯ ಶಿಕ್ಷಣದ ಜೊತೆಗೆ ಈ ಮುಂದಿನವುಗಳಿಗೂ ವಿಸ್ತರಿಸತಕ್ಕದ್ದು:-

(ಎ) ಕಾನೂನಿನ ಒಳಾಂಶ, ಸಂದರ್ಭ, ಅರ್ಥ ಮತ್ತು ಉದ್ದೇಶದ ಬಗ್ಗೆ ಸಾರ್ವತ್ರಿಕ ಅರಿವನ್ನು ಮೂಡಿಸುವುದು;

(ಬಿ) ಕರಡು ಶಾಸನಗಳ ರಚನೆ, ಶಾಸನಗಳ ವ್ಯಾಖ್ಯಾನ, ಹಸ್ತಾಂತರಣ ಪತ್ರರಚನೆ ಮತ್ತು ನ್ಯಾಯಿಕ ಪ್ರಕ್ರಿಯೆಗಳಂಥ ಕಾನೂನಿನ ಆನ್ವಯಿಕ ಶಾಖೆಗಳನ್ನು ಪ್ರಾರಂಭಿಸುವುದು;

(ಸಿ) ತನಿಖೆಯ ವಿಧಿವಿಧಾನಗಳ ಬಗ್ಗೆ ಮತ್ತು ವಿಶ್ಲೇಷಕ ಸಾಕ್ಷ್ಯ ಮಂಡನೆ ಮತ್ತು ಸ್ವಸಂಪೂರ್ಣ ಪುರಾವೆ ನಿರೂಪಣೆ ಬಗ್ಗೆ ನ್ಯಾಯ ವೃತ್ತಿಗರಿಗೆ ತರಬೇತಿ ನೀಡುವುದು;

(ಡಿ) ವಿವಾದಗಳ ಇತ್ಯರ್ಥದ ಪರ್ಯಾಯ ವಿಧಾನಗಳಿಗೆ ಉತ್ತೇಜನ ನೀಡುವುದು;

(ಇ) ಕಾನೂನು ಸೇವಾ ಕೇಂದ್ರ, ನ್ಯಾಯ ಪಂಚಾಯತಿಗಳನ್ನು ಸ್ಥಾಪಿಸುವ ಮೂಲಕ ಕಾನೂನಿನ ಚೈತನ್ಯಶೀಲತೆಯನ್ನು ಪರಿಚಯಿಸುವುದು ಮತ್ತು ವ್ಯಾಜ್ಯ ಮುಕ್ತ ಸಮಾಜ ವ್ಯವಸ್ಥೆಯನ್ನು ಉತ್ತೇಜಿಸುವುದು;

(ಎಫ್) ನ್ಯಾಯಾಂಗ ಕಾರ್ಯದರ್ಶಿಗಳಿಗೆ, ಸದೃಶ ಕಾನೂನು ಸಲಹೆಗಾರರಿಗೆ, ತೀರ್ಪು ರಚನಾಕಾರರಿಗೆ, ಕಾನೂನು-ಸಹಾಯಕರಿಗೆ, ನ್ಯಾಯವಾದಿಗಳ ಗುಮಾಸ್ತರಿಗೆ, ಕಕ್ಷಿದಾರರಿಗೆ ಸೇವೆ ಒದಗಿಸುವವರಿಗೆ ಮತ್ತು ನ್ಯಾಯಿಕ ಸೇವೆಗಳನ್ನು ಒದಗಿಸುವವರಿಗೆ ಸದೃಶ ನ್ಯಾಯಿಕ ವ್ಯಾಸಂಗ ಕ್ರಮಗಳನ್ನು ಪ್ರಾರಂಭಿಸುವುದು.

(2) ವಿಶ್ವವಿದ್ಯಾಲಯವು, ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿ ಪ್ರಶಾಸನ ಸಭೆ ಮತ್ತು ಪ್ರಶಿಕ್ಷಣ ಪರಿಷತ್ತಿನ ಮೂಲಕ ಮೇಲೆ ಹೇಳಿದ ಧ್ಯೇಯೋದ್ದೇಶಗಳನ್ನು ಈಡೇರಿಸತಕ್ಕದ್ದು.

**5. ವಿಶ್ವವಿದ್ಯಾಲಯದ ಅಧಿಕಾರಗಳು ಮತ್ತು ಪ್ರಕಾರ್ಯಗಳು.-** ಈ ಅಧಿನಿಯಮದ ಉಪಬಂಧಗಳು ಮತ್ತು ಶಾಸನಗಳು, ವಿನಿಯಮಗಳು ಹಾಗೂ ಪರ್ಯಾದೇಶಗಳ ಮೂಲಕ ನಿಯಮಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ವಿಶ್ವವಿದ್ಯಾಲಯವು ಈ ಕೆಳಕಂಡ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ: -

(i) ವಿಶ್ವವಿದ್ಯಾಲಯವು ಯುಕ್ತವೆಂದು ಭಾವಿಸಬಹುದಾದಂಥ ಕಾನೂನಿಗೆ ಸಂಬಂಧಪಟ್ಟ ಜ್ಞಾನ ವಿಭಾಗಗಳಲ್ಲಿ ಶಿಕ್ಷಣ ಮತ್ತು ತರಬೇತಿ ನೀಡುವುದು;

(ii) ವಿಶ್ವವಿದ್ಯಾಲಯದ ಮತ್ತು ಕಾನೂನಿನ ಕ್ಷೇತ್ರದಲ್ಲಿ ಸಂಶೋಧನೆ, ಕಾನೂನು ಶಿಕ್ಷಣ ಅಥವಾ ಜ್ಞಾನ ವರ್ಧನೆಯ ಕೇಂದ್ರಗಳ ಆಡಳಿತ ನಿರ್ವಹಣೆ ಹಾಗೂ ವ್ಯವಸ್ಥಾಪನೆ;

(iii) ಕಾನೂನು ಶಿಕ್ಷಣದಲ್ಲಿ ಸಂಶೋಧನೆ ಮತ್ತು ಜ್ಞಾನ ವರ್ಧನೆ ಅಥವಾ ಜ್ಞಾನ ಪ್ರಸಾರಕ್ಕಾಗಿ ಸೌಕರ್ಯ ಕಲ್ಪಿಸುವುದು;

(iv) ಹೊರ ಉಪನ್ಯಾಸಕರಿಂದ ಬೋಧನೆ ಮತ್ತು ವಿಸ್ತರಣಾ ಸೇವೆಗಳನ್ನು ವ್ಯವಸ್ಥೆಗೊಳಿಸುವುದು ಮತ್ತು ಕೈಗೊಳ್ಳುವುದು;

(v) ಪದವಿಗಳು, ಬಿರುದುಗಳು, ಡಿಪ್ಲೋಮಾಗಳು ಮತ್ತಿತರ ವಿದ್ಯಾ ಪ್ರಶಸ್ತಿಗಳನ್ನು ಆರಂಭಿಸುವುದು;

(vi) ಡಿಪ್ಲೊಮಾ ಅಥವಾ ಪ್ರಮಾಣ ಪತ್ರ ನೀಡಲು ಮತ್ತು ಪದವಿ ಮತ್ತಿತರ ವಿದ್ಯಾ ಪ್ರಶಸ್ತಿಗಳನ್ನು ಪ್ರದಾನ ಮಾಡಲು ಪರೀಕ್ಷೆಗಳನ್ನು ನಡೆಸುವುದು ಮತ್ತು ಯುಕ್ತ ಮತ್ತು ಸಾಕಷ್ಟು ಕಾರಣಗಳಿಗಾಗಿ ಅಂಥ ಡಿಪ್ಲೊಮಾಗಳು, ಪ್ರಮಾಣಪತ್ರಗಳು ಅಥವಾ ಇತರ ವಿದ್ಯಾ ಪ್ರಶಸ್ತಿಗಳನ್ನು ಹಿಂತೆಗೆದುಕೊಳ್ಳುವುದು;

(vii) ಶಾಸನಗಳಲ್ಲಿ ಹೇಳಲಾದ ರೀತಿಯಲ್ಲಿ ಕಾನೂನು ಕ್ಷೇತ್ರದಲ್ಲಿ ಉತ್ಕೃಷ್ಟ ಪರಿಣತಿಯುಳ್ಳ ವ್ಯಕ್ತಿಗಳಿಗೆ ಗೌರವ ಪದವಿಗಳನ್ನು ಅಥವಾ ಇತರ ಪ್ರಶಸ್ತಿಗಳನ್ನು ಪ್ರದಾನ ಮಾಡುವುದು;

(viii) ವಿಶ್ವವಿದ್ಯಾಲಯಕ್ಕೆ ಕಾಲೇಜುಗಳನ್ನು, ಸಂಸ್ಥೆಗಳನ್ನು ಸಂಯೋಜಿಸುವುದು ಮತ್ತು ಅಂಥ ಸಂಯೋಜನೆಯನ್ನು ಹಿಂದಕ್ಕೆ ಪಡೆಯುವುದು;

(ix) ಫೀಜುಗಳು ಮತ್ತು ಇತರೆ ವೆಚ್ಚಗಳನ್ನು ಕೇಳುವುದು ಮತ್ತು ಸ್ವೀಕರಿಸುವುದು;

(x) ಹೊಸ ಕಾಲೇಜುಗಳ ಅಥವಾ ಸಂಸ್ಥೆಗಳ ಸಂಯೋಜನೆಗೆ ಮತ್ತು ಹೊಸ ವ್ಯಾಸಂಗಕ್ರಮಗಳನ್ನು ಪ್ರಾರಂಭಿಸುವುದಕ್ಕೆ ಹಾಗೂ ಪ್ರವೇಶಾವಕಾಶ ಹೆಚ್ಚಿಸುವುದಕ್ಕೆ ಸಂದಾಯ ಮಾಡಬೇಕಾದ ಶುಲ್ಕ ಮತ್ತು ಇತರ ವೆಚ್ಚಗಳನ್ನು ನಿರ್ಧರಿಸುವುದು;

(xi) ವಿಶ್ವವಿದ್ಯಾಲಯದ ಅಭಿಪ್ರಾಯದಲ್ಲಿ, ತನ್ನ ಧ್ಯೇಯೋದ್ದೇಶಗಳನ್ನು ಸಾಧಿಸಲು ಅವಶ್ಯವೆಂದು ವಿಶ್ವವಿದ್ಯಾಲಯವು ಅಭಿಪ್ರಾಯಪಡುವಂತಹ ವಿಶೇಷ ಕೇಂದ್ರಗಳು, ವಿಶಿಷ್ಟ ವಿಷಯ ಅಧ್ಯಯನ ಕೇಂದ್ರಗಳು ಅಥವಾ ಸಂಶೋಧನೆ ಹಾಗೂ ಬೋಧನೆಗಾಗಿ ಇತರ ಕೇಂದ್ರಗಳನ್ನು ಸ್ಥಾಪಿಸುವುದು;

(xii) ವಿದ್ಯಾರ್ಥಿಗಳ ವಸತಿಗಾಗಿ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವುದು, ನಿರ್ವಹಿಸುವುದು ಮತ್ತು ಆಡಳಿತ ನಡೆಸುವುದು;

(xiii) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ಶಿಸ್ತನ್ನು ಕಾಪಾಡುವಂಥ ನಿಯಂತ್ರಣವನ್ನು ಜಾರಿಗೆ ತರುವುದು ಮತ್ತು ಅವರ ಆರೋಗ್ಯ ವೃದ್ಧಿಗಾಗಿ ಏರ್ಪಾಟುಗಳನ್ನು ಮಾಡುವುದು;

(xiv) ರಾಜ್ಯಸರ್ಕಾರದ ಪೂರ್ವಾನುಮೋದನೆ ಪಡೆದು ಶೈಕ್ಷಣಿಕ, ತಾಂತ್ರಿಕ, ಆಡಳಿತ, ಲಿಪಿಕ ಮತ್ತು ಇತರ ಹುದ್ದೆಗಳನ್ನು ಸೃಜಿಸುವುದು ಮತ್ತು ಅವುಗಳಿಗೆ ನೇಮಕಾತಿಗಳನ್ನು ಮಾಡುವುದು;

(xv) ವಿಶ್ವವಿದ್ಯಾಲಯದ ಉದ್ಯೋಗಿಗಳ ಎಲ್ಲಾ ಪ್ರವರ್ಗದವರಲ್ಲಿ ಶಿಸ್ತನ್ನು ನಿಯಂತ್ರಿಸಿ ಜಾರಿಗೊಳಿಸುವುದು ಮತ್ತು ಅಂಥ ಉದ್ಯೋಗಿಗಳ ಉದ್ಯೋಗ ನಿಬಂಧನೆಗಳು ಮತ್ತು ಸೇವಾ ಷರತ್ತುಗಳನ್ನು ವಿಧಿಸುವುದು;

(xvi) ರಾಜ್ಯದ ಮೀಸಲಾತಿ ನೀತಿಗೊಳಪಟ್ಟು ರಾಜ್ಯಸರ್ಕಾರದ ಪೂರ್ವ ಸಹಮತಿಯೊಂದಿಗೆ ವಿಶ್ವವಿದ್ಯಾಲಯಕ್ಕೆ ಅಗತ್ಯವಿರುವ ಉಪನ್ಯಾಸಕರ, ಪ್ರವಾಚಕರ, ಪ್ರಾಧ್ಯಾಪಕರ, ಮತ್ತು ಇತರೆ ಬೋಧಕ ಸಿಬ್ಬಂದಿಯ ಹುದ್ದೆಗಳನ್ನು ಸೃಜಿಸುವುದು ಮತ್ತು ಅಂಥ ಹುದ್ದೆಗಳಿಗೆ ವ್ಯಕ್ತಿಗಳನ್ನು ನೇಮಕ ಮಾಡುವುದು;

(xvii) ಫೆಲೋಷಿಪ್‌ಗಳು, ವಿದ್ಯಾರ್ಥಿ ವೇತನಗಳು, ಪಾರಿತೋಷಕಗಳು ಮತ್ತು ಪದಕಗಳನ್ನು ಪ್ರಾರಂಭಿಸುವುದು ಮತ್ತು ನೀಡುವುದು;

(xviii) ಸಂಶೋಧನೆ ಮತ್ತು ಇತರ ವಿಷಯಗಳ ಮುದ್ರಣ, ಪುನರ್ ಮುದ್ರಣ ಮತ್ತು ಪ್ರಕಟಣೆ ಮಾಡುವುದಕ್ಕಾಗಿ ಕಾರ್ಯನೀತಿಯನ್ನು ರೂಪಿಸುವುದು ಮತ್ತು ವಸ್ತುಪ್ರದರ್ಶನಗಳ ವ್ಯವಸ್ಥೆ ಮಾಡುವುದು;

(xix) ಕಾನೂನು, ನ್ಯಾಯ ಮತ್ತು ಸಾಮಾಜಿಕ ಅಭಿವೃದ್ಧಿಯ ವಿಷಯದಲ್ಲಿ ಎಲ್ಲಾ ರೀತಿಯಲ್ಲೂ ಸಂಶೋಧನೆ ಪ್ರಾಯೋಜಿಸುವುದು ಮತ್ತು ಕೈಗೊಳ್ಳುವುದು;

(xx) ವಿಶ್ವವಿದ್ಯಾಲಯವು, ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಕಾನೂನು ನ್ಯಾಯ, ಸಾಮಾಜಿಕ ಅಭಿವೃದ್ಧಿ ಮತ್ತು ಸಂಬಂಧಪಟ್ಟ ವಿಷಯಗಳಲ್ಲಿ, ಶಿಕ್ಷಣ, ತರಬೇತಿ ಮತ್ತು ಸಂಶೋಧನೆಯ ವಿಷಯಗಳಲ್ಲಿ, ಇತರ ವಿಶ್ವವಿದ್ಯಾಲಯಗಳು ಮತ್ತು ಸಂಸ್ಥೆಗಳೊಂದಿಗೆ ಸಮನ್ವಯ ಕ್ಷೇತ್ರಗಳನ್ನು ಗುರುತಿಸುವುದು;

(xxi) ವಿಶ್ವವಿದ್ಯಾಲಯವು ಹೊಂದಿರುವಂಥ ಉದ್ದೇಶಗಳನ್ನೇ ಪೂರ್ಣವಾಗಿ ಅಥವಾ ಭಾಗಶಃ ಹೊಂದಿರುವ ವಿಶ್ವದ ಯಾವುದೇ ಭಾಗದಲ್ಲಿರುವ ಇತರ ವಿಶ್ವವಿದ್ಯಾಲಯಗಳು ಅಥವಾ ಉನ್ನತ ಶಿಕ್ಷಣ ಸಂಸ್ಥೆಗಳೊಡನೆ ಅಧ್ಯಾಪಕರು ಮತ್ತು ವಿದ್ವಾಂಸರನ್ನು ಸಮಾನ ಉದ್ದೇಶಗಳಿಗೆ ಅನುಕೂಲಕರವಾದ ರೀತಿಯಲ್ಲಿ ವಿನಿಮಯ ಮಾಡಿಕೊಳ್ಳುವ ಬಗ್ಗೆ ಸಮನ್ವಯ ಕ್ಷೇತ್ರಗಳನ್ನು ಗುರುತಿಸುವುದು;

(xxii) ವಿಶ್ವವಿದ್ಯಾಲಯದ ವೆಚ್ಚವನ್ನು ನಿಯಂತ್ರಿಸುವುದು ಮತ್ತು ಲೆಕ್ಕಪತ್ರಗಳನ್ನು ನಿರ್ವಹಿಸುವುದು;

(xxiii) ವಿಶ್ವವಿದ್ಯಾಲಯವು, ಅವಶ್ಯವೆಂದು ಪರಿಗಣಿಸಬಹುದಾದಂಥ ತರಗತಿಯ ಕೊಠಡಿಗಳು, ಅಧ್ಯಯನ ಹಾಲ್‌ಗಳು ಮತ್ತು ಸಭಾಂಗಣಗಳನ್ನು ವಿಶ್ವವಿದ್ಯಾಲಯದಲ್ಲಿ ಅಥವಾ ಬೇರೆಕಡೆಗಳಲ್ಲಿ ಸ್ಥಾಪಿಸುವುದು ಮತ್ತು ನಿರ್ವಹಿಸುವುದು ಹಾಗೂ ಅವುಗಳಿಗೆ ಪೀಠೋಪಕರಣ ಇತ್ಯಾದಿ ಒದಗಿಸುವುದು;

(xxiv) ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮತ್ತು ಸಂಶೋಧನೆಗೆ ಅವಶ್ಯಕವಾದ ಗ್ರಂಥಾಲಯಗಳು ಮತ್ತು ವಾಚನಾಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(xxv) ವಿಶ್ವವಿದ್ಯಾಲಯವನ್ನು ಸ್ಥಾಪಿಸಿರುವ ಧ್ಯೇಯೋದ್ದೇಶಗಳಿಗೆ ಸುಸಂಗತವಾದ ಅನುದಾನಗಳು, ಧನಸಹಾಯಗಳು, ವಂತಿಗೆಗಳು, ದೇಣಿಗೆಗಳು ಮತ್ತು ದಾನಗಳನ್ನು ಸ್ವೀಕರಿಸುವುದು;

(xxvi) ವಿಶ್ವವಿದ್ಯಾಲಯವು, ತಾನು ಯೊಗ್ಯ ಮತ್ತು ಸೂಕ್ತವೆಂದು ಭಾವಿಸಿದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ವಿಶ್ವವಿದ್ಯಾಲಯದ ಉದ್ದೇಶಕ್ಕಾಗಿ ಅವಶ್ಯಕವಾದ ಅಥವಾ ಅನುಕೂಲಕರವಾಗಬಹುದಾದ ಯಾವುದೇ ಭೂಮಿ ಅಥವಾ ಕಟ್ಟಡ ಅಥವಾ ಕಾಮಗಾರಿಗಳನ್ನು ಖರೀದಿಸುವುದು, ಗುತ್ತಿಗೆಗೆ ತೆಗೆದುಕೊಳ್ಳುವುದು ಅಥವಾ ದಾನರೂಪದಲ್ಲಿ ಅಥವಾ ಅನ್ಯಥಾ ಸ್ವೀಕರಿಸುವುದು ಮತ್ತು ಅಂಥ ಯಾವುದೇ ಕಟ್ಟಡ ಅಥವಾ ಕಾಮಗಾರಿಗಳನ್ನು ನಿರ್ಮಿಸುವುದು ಮತ್ತು ನಿರ್ವಹಿಸಿಕೊಂಡುಬರುವುದು;

(xxvii) ವಿಶ್ವವಿದ್ಯಾಲಯದ ಹಿತಾಸಕ್ತಿಗೆ ಮತ್ತು ಕಾರ್ಯಚಟುವಟಿಕೆಗಳಿಗೆ ಬಾಧಕವಾಗದಂತೆ ತಾನು ಯೋಗ್ಯ ಮತ್ತು ಸೂಕ್ತವೆಂದು ಭಾವಿಸುವಂಥ ನಿಬಂಧನೆಗಳ ಮೇಲೆ, ಸರ್ಕಾರವು ಮಂಜೂರ್ಮಾಡಿದ ಸ್ಥಿರಸ್ವತ್ತಿನ ಹೊರತಾಗಿ ಎಲ್ಲಾ ಚರ ಅಥವಾ ಸ್ಥಿರ ಸ್ವತ್ತುಗಳನ್ನು ಅಥವಾ ಅವುಗಳ ಯಾವುದೇ ಭಾಗವನ್ನು ಮಾರಾಟ ಮಾಡುವುದು, ವಿನಿಮಯ ಮಾಡುವುದು, ಗುತ್ತಿಗೆಗೆ ಕೊಡುವುದು ಅಥವಾ ಅನ್ಯಥಾ ವಿಲೆ ಮಾಡುವುದು;

(xxviii) ಸರ್ಕಾರದ ಭದ್ರತೆಗಳು ಅಥವಾ ಇತರ ಪ್ರಾಮಿಸರಿನೋಟುಗಳನ್ನು, ವಿನಿಮಯ ಪತ್ರ, ಚೆಕ್ ಅಥವಾ ಇತರ ವರ್ಗಾವಣೀಯ ಲಿಖಿತಪತ್ರಗಳನ್ನು ಬರೆದುಕೊಡುವುದು ಮತ್ತು ಸ್ವೀಕರಿಸುವುದು, ತಯಾರಿಸಿಕೊಡುವುದು ಅಥವಾ ಹಿಂಬರಹ ಬರೆಯುವುದು, ಡಿಸ್ಕೌಂಟ್ ಮಾಡುವುದು ಮತ್ತು ವರ್ಗಾವಣೆ ಮಾಡುವುದು;

(xxix) ವಿಶ್ವವಿದ್ಯಾಲಯಕ್ಕೆ ಸೇರಿದ ಅಥವಾ ರಾಜ್ಯ ಸರ್ಕಾರದ ಪೂರ್ವ ಸಹಮತಿಯೊಂದಿಗೆ ವಿಶ್ವವಿದ್ಯಾಲಯವು ಸ್ವಾಧೀನಪಡಿಸಿಕೊಳ್ಳಬೇಕಾದ ಸರ್ಕಾರಿ ಭದ್ರತೆಗಳೂ ಒಳಗೊಂಡಂತೆ ಚರ ಅಥವಾ ಸ್ಥಿರ ಸ್ವತ್ತಿನ ಸಂಬಂಧದಲ್ಲಿ, ಹಸ್ತಾಂತರಣ ಪತ್ರಗಳನ್ನು, ವರ್ಗಾವಣೆ ಪತ್ರಗಳನ್ನು, ಮರು ಹಸ್ತಾಂತರಣ ಪತ್ರಗಳನ್ನು, ಅಡಮಾನ ಪತ್ರಗಳನ್ನು, ಗುತ್ತಿಗೆ ಪತ್ರಗಳನ್ನು, ಅನುಮತಿ ಪತ್ರಗಳನ್ನು ಮತ್ತು ಒಪ್ಪಂದ ಪತ್ರಗಳನ್ನು ಬರೆದುಕೊಡುವುದು;

(xxx) ವಿಶ್ವವಿದ್ಯಾಲಯದ ಲಿಖಿತ ಪತ್ರವನ್ನು ಬರೆದುಕೊಡುವುದಕ್ಕಾಗಿ ಅಥವಾ ಯಾವುದೇ ವ್ಯವಹಾರವನ್ನು ಮಾಡುವುದಕ್ಕಾಗಿ ತಾನು ಸೂಕ್ತವೆಂದು ಭಾವಿಸುವ ಯಾವೊಬ್ಬ ವ್ಯಕ್ತಿಯನ್ನು ನೇಮಕ ಮಾಡುವುದು;

(xxxi) ವಿಶ್ವವಿದ್ಯಾಲಯದ ಯಾವುದೇ ತರಗತಿಯನ್ನು ಅಥವಾ ವಿಭಾಗವನ್ನು ನಡೆಸುವುದನ್ನು ಕೈಬಿಡುವುದು ಅಥವಾ ನಿಲ್ಲಿಸುವುದು;

(xxxii) ಅನುದಾನಗಳನ್ನು ಪಡೆಯುವುದಕ್ಕಾಗಿ ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳು, ವಿಶ್ವವಿದ್ಯಾಲಯ ಅನುದಾನ ಆಯೋಗ ಅಥವಾ ಇತರ ಪ್ರಾಧಿಕಾರಗಳೊಡನೆ ಒಪ್ಪಂದ ಮಾಡಿಕೊಳ್ಳುವುದು;

(xxxiii) ತಾನು ಸೂಕ್ತವೆಂದು ಭಾವಿಸುವಂಥ ನಿಬಂಧನೆಗಳ ಮೇಲೆ, ಅನುದಾನ ಅಥವಾ ಹಣವನ್ನು, ಭದ್ರತೆಗಳನ್ನು ಅಥವಾ ಯಾವುದೇ ಬಗೆಯ ಸ್ವತ್ತನ್ನು ಸ್ವೀಕರಿಸುವುದು;

(xxxiv) ವಿಶ್ವವಿದ್ಯಾಲಯದ ಎಲ್ಲಾ ಅಥವಾ ಯಾವುವೇ ಸ್ವತ್ತುಗಳ ಮತ್ತು ಆಸ್ತಿಗಳ ಮೇಲೆ ಭದ್ರತೆಯೊಡನೆ ಅಥವಾ ಭದ್ರತೆಗಳಿಲ್ಲದೆ ಮತ್ತು ತಾನು ಸೂಕ್ತವೆಂದು ಭಾವಿಸುವಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಬಂಧಪತ್ರಗಳ, ಅಡಮಾನಗಳ, ಪ್ರಾಮಿಸರಿ ನೋಟುಗಳ ಅಥವಾ ಇತರ ದಾಯಿತ್ವಗಳ ಅಥವಾ ಭದ್ರತೆಗಳ ಮೇಲೆ ಹಣ ಸಾಲಪಡೆಯುವುದು ಮತ್ತು ಹಣಸಾಲ ಪಡೆಯುವುದಕ್ಕೆ ಪ್ರಾಸಂಗಿಕವಾಗಿ ಉಂಟಾದ ಎಲ್ಲಾ ವೆಚ್ಚಗಳನ್ನು ವಿಶ್ವವಿದ್ಯಾಲಯದ ನಿಧಿಯಿಂದ ಸಂದಾಯ ಮಾಡುವುದು ಮತ್ತು ಪಡೆದ ಯಾವುದೇ ಸಾಲವನ್ನು ಮರುಪಾವತಿ ಮಾಡುವುದು ಮತ್ತು ವಿಮೋಚನೆಗೊಳಿಸುವುದು;

(xxxv) ವಿಶ್ವವಿದ್ಯಾಲಯದ ನಿಧಿಗಳು ಅಥವಾ ವಿಶ್ವವಿದ್ಯಾಲಯಕ್ಕೆ ವಹಿಸಿಕೊಟ್ಟಿರುವ ಹಣವನ್ನು ಪ್ರಯೋಜನಕಾರಿಯೆಂದು ತಾನು ಭಾವಿಸುವಂಥ ಭದ್ರತೆಗಳಲ್ಲಿ ಅಥವಾ ಅವುಗಳ ಮೇಲೆ ಮತ್ತು ಅಂಥ ರೀತಿಯಲ್ಲಿ ಹೂಡುವುದು ಮತ್ತು ಕಾಲಕಾಲಕ್ಕೆ ಯಾವುದೇ ಹೂಡಿಕೆಯನ್ನು ಬದಲಾಯಿಸುವುದು;

(xxxvi) ವಿಶ್ವವಿದ್ಯಾಲಯದ ವ್ಯವಹಾರಗಳು ಮತ್ತು ಆಡಳಿತವನ್ನು ನಿಯಂತ್ರಿಸುವುದಕ್ಕಾಗಿ ಅವಶ್ಯಕವೆಂದು ಪರಿಗಣಿಸುವಂಥ ಶಾಸನಗಳನ್ನು ಕಾಲಕಾಲಕ್ಕೆ ರಚಿಸುವುದು ಮತ್ತು ಅವನ್ನು ಬದಲಾಯಿಸುವುದು, ಮಾರ್ಪಡಿಸುವುದು ಮತ್ತು ರದ್ದುಗೊಳಿಸುವುದು;

(xxxvii) ಶಾಸನಗಳ ಮೂಲಕ ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೊಳಪಟ್ಟು, ಶೈಕ್ಷಣಿಕ, ತಾಂತ್ರಿಕ, ಆಡಳಿತ ಮತ್ತು ಇತರ ಸಿಬ್ಬಂದಿಯ ಪ್ರಯೋಜನಕ್ಕಾಗಿ ತಾನು ಸೂಕ್ತವೆಂದು ಭಾವಿಸಬಹುದಾದಂಥ ನಿವೃತ್ತಿವೇತನ, ವಿಮೆ, ಭವಿಷ್ಯನಿಧಿ ಮತ್ತು ಉಪದಾನದಂಥ ನಿಧಿಗಳನ್ನು ರಚಿಸುವುದು ಮತ್ತು ವಿಶ್ವವಿದ್ಯಾಲಯದ ಯಾವೊಬ್ಬ ನೌಕರನ ಪ್ರಯೋಜನಕ್ಕಾಗಿ ತಾನು ಸೂಕ್ತವೆಂದು ಭಾವಿಸುವಂಥ ಅನುದಾನಗಳನ್ನು ನೀಡುವುದು ಮತ್ತು ವಿಶ್ವವಿದ್ಯಾಲಯದ ಸಿಬ್ಬಂದಿ ಮತ್ತು ವಿದ್ಯಾರ್ಥಿಗಳ ಪ್ರಯೋಜಕ್ಕೆಂದು ಉದ್ದೇಶಿಸಿದ ಸಂಘಗಳು, ಸಂಸ್ಥೆಗಳು, ನಿಧಿಗಳು, ನ್ಯಾಸಗಳು ಮತ್ತು ವಾಹನ ಸೌಲಭ್ಯ ಸ್ಥಾಪನೆ ಮತ್ತು ಬೆಂಬಲಕ್ಕಾಗಿ ನೆರವು ನೀಡುವುದು;

(xxxviii) ಕ್ಯಾಂಪಸ್‌ನಲ್ಲೇ ಉದ್ಯೋಗಿ ಆಯ್ಕೆಗಾಗಿ ಮತ್ತು ಉದ್ಯೋಗ ನೆರವು ಸಂಸ್ಥೆಯ ಸ್ಥಾಪನೆಗಾಗಿ ವ್ಯವಸ್ಥೆ ಮಾಡುವುದು;

(xxxix) ತನ್ನ ಎಲ್ಲಾ ಅಥವಾ ಯಾವುದೇ ಅಧಿಕಾರಗಳನ್ನು ಮತ್ತು ಪ್ರಕಾರ್ಯಗಳನ್ನು, ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರಕ್ಕೆ ಅಥವಾ ಯಾವುದೇ ಸಮಿತಿಗೆ ಅಥವಾ ಯಾವುದೇ ಉಪಸಮಿತಿಗೆ ಅಥವಾ ತನ್ನ ನಿಕಾಯದ ಅಥವಾ ತನ್ನ ಕಚೇರಿಗಳ ಒಬ್ಬರು ಅಥವಾ ಹೆಚ್ಚು ಸದಸ್ಯರಿಗೆ ವಹಿಸಿಕೊಡುವುದು; ಮತ್ತು

(xl) ತನ್ನ ಧ್ಯೇಯೋದ್ದೇಶಗಳು, ಅಧಿಕಾರಗಳು ಮತ್ತು ಪ್ರಕಾರ್ಯಗಳ ಅಥವಾ ಅವುಗಳ ಪೈಕಿ ಯಾವುದಾದರೊಂದರ ಸಾಧನೆಗಾಗಿ ಅಥವಾ ವಿಸ್ತರಣೆಗಾಗಿ, ಅವಶ್ಯಕವೆಂದು, ಅನುಕೂಲಕರವೆಂದು ಅಥವಾ ಪ್ರಾಸಂಗಿಕವೆಂದು ವಿಶ್ವವಿದ್ಯಾಲಯವು ಪರಿಗಣಿಸುವಂಥ ಇತರ ಎಲ್ಲಾ ಕ್ರಮಗಳನ್ನು ಮತ್ತು ಕಾರ್ಯಗಳನ್ನು ಕೈಗೊಳ್ಳುವುದು.

**6. ಅಧಿಕಾರಕ್ಷೇತ್ರ ಮತ್ತು ವಿಶೇಷಾಧಿಕಾರಗಳಿಗೆ ಪ್ರವೇಶ.–** ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000 ರಲ್ಲಿ (2001ರ ಕರ್ನಾಟಕ ಅಧಿನಿಯಮ 29) ಏನೇ ಇದ್ದರೂ,–

(i) ವಿಶ್ವವಿದ್ಯಾಲಯದ ಅಧಿಕಾರಕ್ಷೇತ್ರವು ಇಡೀ ಕರ್ನಾಟಕ ರಾಜ್ಯಕ್ಕೆ ವ್ಯಾಪ್ತವಾಗತಕ್ಕದ್ದು;

(ii) ಕರ್ನಾಟಕ ರಾಜ್ಯದಲ್ಲಿರುವ ಕಾನೂನು ಶಿಕ್ಷಣ ನೀಡುವ ಯಾವುದೇ ಕಾಲೇಜು, ವಿಶ್ವವಿದ್ಯಾಲಯದ ಒಪ್ಪಿಗೆ ಮತ್ತು ಸರ್ಕಾರದ ಮಂಜೂರಾತಿಯೊಂದಿಗೆ ಹೊರತು, ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ವಿಶ್ವವಿದ್ಯಾಲಯವನ್ನು ಹೊರತುಪಡಿಸಿ ಭಾರತದಲ್ಲಿರುವ ಅಥವಾ ವಿದೇಶದಲ್ಲಿರುವ ಯಾವುದೇ ಇತರ ವಿಶ್ವವಿದ್ಯಾಲಯದ ಜೊತೆಯಲ್ಲಿ ಯಾವುದೇ ರೀತಿಯಲ್ಲಿ ಸಂಬಂಧ ಹೊಂದಿರತಕ್ಕದ್ದಲ್ಲ ಅಥವಾ ಅದರ ವಿಶೇಷಾಧಿಕಾರಗಳಿಗೆ ಪ್ರವೇಶ ಕೋರತಕ್ಕದ್ದಲ್ಲ;

(iii) ರಾಜ್ಯದಲ್ಲಿರುವ ಯಾವುದೇ ಕಾನೂನು ಕಾಲೇಜು ಅಥವಾ ಕಾನೂನು ಶಿಕ್ಷಣ ನೀಡುವ ಸಂಸ್ಥೆಯು, ಗೊತ್ತುಪಡಿಸಿದ ದಿನಾಂಕಕ್ಕೆ ಮೊದಲು ಇತರ ವಿಶ್ವವಿದ್ಯಾಲಯದಿಂದ ಪಡೆಯುತ್ತಿದ್ದಂಥ ಯಾವುದೇ ವಿಶೇಷಾಧಿಕಾರವನ್ನು, ಅಂಥ ದಿನಾಂಕದಿಂದ ಜಾರಿಗೆ ಬರುವಂತೆ ಹಿಂದಕ್ಕೆ ಪಡೆಯಲಾಗಿದೆ ಎಂದು ಭಾವಿಸತಕ್ಕದ್ದು;

(iv) ಈ ಅಧ್ಯಾದೇಶವು ಪ್ರಾರಂಭವಾದ ದಿನಾಂಕದಂದು ಮತ್ತು ದಿನಾಂಕದಿಂದ ಜಾರಿಗೆ ಬರುವಂತೆ, ಈ ಹಿಂದೆ ಕರ್ನಾಟಕ, ಮೈಸೂರು, ಬೆಂಗಳೂರು, ತುಮಕೂರು, ಗುಲಬರ್ಗಾ, ಮಂಗಳೂರು, ಮಹಿಳಾ ಮತ್ತು ಕುವೆಂಪು ವಿಶ್ವವಿದ್ಯಾಲಯಗಳ ವಿಶೇಷಾಧಿಕಾರಕ್ಕೆ ಪ್ರವೇಶ ಪಡೆದುಕೊಂಡಿದ್ದ ಅಥವಾ ಸಂಯೋಜಿತವಾಗಿದ್ದ ಎಲ್ಲಾ ಕಾಲೇಜುಗಳು ಮತ್ತು ಸ್ನಾತಕೋತ್ತರ ವಿಭಾಗಗಳೂ ಸೇರಿದಂತೆ ಕಾನೂನು ಶಿಕ್ಷಣ ನೀಡುತ್ತಿರುವ ಸ್ವಾಯತ್ತ ಸಂಸ್ಥೆಗಳಿಗೆ, ಈ ವಿಶ್ವವಿದ್ಯಾಲಯದ ವಿಶೇಷಾಧಿಕಾರಗಳಿಗೆ ಪ್ರವೇಶ ನೀಡಲಾಗಿದೆ ಎಂದು ಅಥವಾ ಅವನ್ನು ಈ ವಿಶ್ವವಿದ್ಯಾಲಯಕ್ಕೆ ಸಂಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

**7. ವಿಶ್ವವಿದ್ಯಾಲಯಕ್ಕೆ ಪ್ರವೇಶ.–** (1) ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೊಳಪಟ್ಟು ವಿಶ್ವವಿದ್ಯಾಲಯದಲ್ಲಿ ಎಲ್ಲಾ ವ್ಯಕ್ತಿಗಳಿಗೆ ಮುಕ್ತ ಪ್ರವೇಶ ಇರತಕ್ಕದ್ದು.

(2) (1)ನೇ ಉಪಪ್ರಕರಣದಲ್ಲಿ ಇರುವುದು ಯಾವುದೂ ವಿಶ್ವವಿದ್ಯಾಲಯವನ್ನು,–

(ಎ) ನಿಯಮಿಸಲಾದ ಶೈಕ್ಷಣಿಕ ಅರ್ಹತೆಗಳನ್ನು ಅಥವಾ ಗುಣಮಟ್ಟವನ್ನು ಪಡೆದುಕೊಂಡಿರದ ಯಾವೊಬ್ಬ ವ್ಯಕ್ತಿಗೆ ಯಾವುದೇ ವ್ಯಾಸಂಗ ಕ್ರಮಕ್ಕೆ ಪ್ರವೇಶ ನೀಡುವುದಕ್ಕೆ;

(ಬಿ) ಪದವಿ, ಡಿಪ್ಲೋಮಾ ಅಥವಾ ಇತರ ಶೈಕ್ಷಣಿಕ ಪ್ರಶಸ್ತಿ ನೀಡಿಕೆಗಾಗಿ ಅಗತ್ಯಪಡಿಸಲಾದ ಕನಿಷ್ಠ ಗುಣಮಟ್ಟಕ್ಕಿಂತ ತನ್ನ ಶೈಕ್ಷಣಿಕ ಸಾಧನೆಯು, ಕಡಿಮೆ ಇರುವ ಯಾವೊಬ್ಬ ವಿದ್ಯಾರ್ಥಿಯನ್ನು ವಿಶ್ವವಿದ್ಯಾಲಯದ ಹಾಜರಿಪಟ್ಟಿಯಲ್ಲಿ ಉಳಿಸಿಕೊಳ್ಳುವುದಕ್ಕೆ; ಅಥವಾ

(ಸಿ) ವಿಶ್ವವಿದ್ಯಾಲಯದ ಹಿತಾಸಕ್ತಿಗೆ ಅಥವಾ ಇತರ ವಿದ್ಯಾರ್ಥಿಗಳ ಮತ್ತು ಅಧ್ಯಾಪಕರ ಹಕ್ಕುಗಳು ಮತ್ತು ವಿಶೇಷಾಧಿಕಾರಗಳಿಗೆ ಬಾಧಕವಾಗುವಂತಿರುವ ನಡತೆಯುಳ್ಳ ಯಾವೊಬ್ಬ ವ್ಯಕ್ತಿಗೆ ಅಥವಾ ಯಾವೊಬ್ಬ ವಿದ್ಯಾರ್ಥಿಗೆ ಪ್ರವೇಶ ನೀಡುವುದಕ್ಕೆ ಅಥವಾ ಅವರನ್ನು ಉಳಿಸಿಕೊಳ್ಳುವುದಕ್ಕೆ,

–ಅಗತ್ಯಪಡಿಸತಕ್ಕದ್ದಲ್ಲ.

(3) (2)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು ಸರ್ಕಾರವು, ಆದೇಶದ ಮೂಲಕ ಅಂಥ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಶೇಕಡಾವಾರು ಸ್ಥಾನಗಳನ್ನು ವಿಶ್ವವಿದ್ಯಾಲಯವು, ಅನುಸೂಚಿತ ಜಾತಿಗಳಿಗೆ, ಅನುಸೂಚಿತ ಪಂಗಡಗಳಿಗೆ ಮತ್ತು ಇತರ ಹಿಂದುಳಿದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳಿಗಾಗಿ ಮೀಸಲಿಡತಕ್ಕದ್ದೆಂದು ನಿರ್ದೇಶಿಸಬಹುದು ಮತ್ತು ಅಂಥ ನಿರ್ದೇಶನವನ್ನು ನೀಡಲಾಗಿದ್ದಲ್ಲಿ ವಿಶ್ವವಿದ್ಯಾಲಯವು ತದನುಸಾರವಾಗಿ ಸ್ಥಾನಗಳನ್ನು ಮೀಸಲಿಡತಕ್ಕದ್ದು.

**8. ಶಿಸ್ತು, ಪರಿವೀಕ್ಷಣೆ ಮತ್ತು ನಿಯಂತ್ರಣ.–** (1) ಕುಲಾಧಿಪತಿಯವರು ತಾನಾಗಿಯೇ ಅಥವಾ ರಾಜ್ಯ ಸರ್ಕಾರದ ಶಿಫಾರಸುಗಳ ಮೇಲೆ ತಾನು ನಿರ್ದೇಶಿಸಬಹುದಾದಂತೆ ಒಬ್ಬ ಅಥವಾ ಹೆಚ್ಚು ವ್ಯಕ್ತಿಗಳಿರುವ ಒಂದು ವಿಚಾರಣಾ ಆಯೋಗದಿಂದ, ವಿಶ್ವವಿದ್ಯಾಲಯದ ಅದರ ಕಟ್ಟಡಗಳ, ಪ್ರಯೋಗ ಶಾಲೆಗಳ, ಗ್ರಂಥಾಲಯಗಳ, ವಸ್ತು ಸಂಗ್ರಹಾಲಯಗಳ, ಕಾರ್ಯಾಗಾರಗಳ ಮತ್ತು ಸಾಧನ ಸಾಮಗ್ರಿಗಳ ಹಾಗೂ ವಿಶ್ವವಿದ್ಯಾಲಯವು ನಿರ್ವಹಿಸುವ, ಆಡಳಿತ ನಡೆಸುವ, ಮನ್ನಣೆ ಕೊಟ್ಟಿರುವ ಅಥವಾ ಅನುಮೋದಿಸಿರುವ ಯಾವುದೇ ಸಂಸ್ಥೆ ಮತ್ತು ವಿಶ್ವವಿದ್ಯಾಲಯವು ನಡೆಸಿದ ಅಥವಾ ನಿರ್ವಹಿಸಿದ ಪರೀಕ್ಷೆಗಳ, ಬೋಧನೆಗಳ ಮತ್ತು ಇತರ ಕೆಲಸಗಳ ಪರಿವೀಕ್ಷಣೆಯನ್ನು ಮಾಡಿಸಬಹುದು ಮತ್ತು ವಿಶ್ವವಿದ್ಯಾಲಯದ ಯಾವೊಬ್ಬ ನೌಕರನ ವಿರುದ್ಧ ವಿಶ್ವವಿದ್ಯಾಲಯಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಪೂರಕವಾಗಿ ಮಾಡಲಾದ ಯಾವುದೇ ನಿರ್ದಿಷ್ಟ ಆಪಾದನೆಗಳ ಬಗ್ಗೆ ಅದೇ ರೀತಿ ಪರಿವೀಕ್ಷಣೆ ಮಾಡಿಸಬಹುದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ಪರಿವೀಕ್ಷಣೆ ಅಥವಾ ವಿಚಾರಣೆಯನ್ನು ಮಾಡಲು ನಿರ್ದೇಶಿಸಲಾದ ಆಯೋಗವು ಆ ಉದ್ದೇಶಕ್ಕಾಗಿ ಸಂಬಂಧಪಟ್ಟ ಸಂಸ್ಥೆಗಳನ್ನು ಮತ್ತು ಆವರಣಗಳನ್ನು ಪ್ರವೇಶಿಸಲು ಮತ್ತು ಅಗತ್ಯವಾಗಬಹುದಾದಂಥ ಲೆಕ್ಕಪತ್ರಗಳನ್ನು ಅಥವಾ ಇತರ ದಾಖಲೆಗಳನ್ನು ಪರಿವೀಕ್ಷಿಸಲು ಅವಕಾಶವಿರತಕ್ಕದ್ದು.

(3) ಆಯೋಗವು, ಪರಿವೀಕ್ಷಣೆಯ ಅಥವಾ ವಿಚಾರಣೆಯ ಫಲಿತಾಂಶದ ವರದಿಯನ್ನು ಕುಲಾಧಿಪತಿಗೆ ಸಲ್ಲಿಸತಕ್ಕದ್ದು ಮತ್ತು ಅದರ ಪ್ರತಿಯನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(4) ಪರಿವೀಕ್ಷಣೆಯ ವರದಿಯನ್ನು ಸ್ವೀಕರಿಸಿದ ಕೂಡಲೇ ಕುಲಾಧಿಪತಿಯು, ಅದರ ಮೇಲೆ ತನ್ನ ತೀರ್ಮಾನಗಳನ್ನು ದಾಖಲಿಸತಕ್ಕದ್ದು ಮತ್ತು ಅವಶ್ಯಕವಾಗಬಹುದಾದ ಮುಂದಿನ ಕ್ರಮ ಕೈಗೊಳ್ಳುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(5) ರಾಜ್ಯ ಸರ್ಕಾರವು, ವಿಚಾರಣೆಯ ಅಥವಾ ಪರಿವೀಕ್ಷಣೆಯ ವರದಿಯಲ್ಲಿಯ ತೀರ್ಮಾನಗಳಿಗೆ ಸಂಬಂಧಿಸಿದಂತೆ ಕುಲಾಧಿಪತಿಯು ನಿರ್ದೇಶಿಸಿದಂಥ ಕ್ರಮ ಕೈಗೊಳ್ಳಲು ಪ್ರಾರಂಭಿಸುವಂತೆ ಕುಲಪತಿಗೆ ನಿರ್ದೇಶಿಸತಕ್ಕದ್ದು ಮತ್ತು ಪ್ರಶಾಸನಸಭೆಯು ಸರ್ಕಾರದ ನಿರ್ದೇಶನಗಳನ್ನು ಅನುಷ್ಠಾನಗೊಳಿಸತಕ್ಕದ್ದು.

(6) ಕುಲಪತಿಯು, ರಾಜ್ಯ ಸರ್ಕಾರದ ಆದೇಶಗಳಲ್ಲಿ ನಿರ್ದಿಷ್ಟಪಡಿಸಲಾದ ರಾಜ್ಯ ಸರ್ಕಾರದ ನಿರ್ದೇಶನಗಳನ್ನು ಪಾಲಿಸಿ ತಾನು ಕೈಗೊಂಡ ಕ್ರಮದ ಬಗ್ಗೆ ಒಂದು ವರದಿಯನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(7) ಕುಲಪತಿಯು, ರಾಜ್ಯ ಸರ್ಕಾರದ ತೀರ್ಮಾನಗಳನ್ನು ಪಾಲಿಸಲು ತಪ್ಪಿದಲ್ಲಿ, ಆಗ ರಾಜ್ಯ ಸರ್ಕಾರದ ಆದೇಶಗಳಲ್ಲಿ ತಿಳಿಸಿರುವ ಅವಧಿಯೊಳಗೆ ಅದನ್ನು ಕುಲಾಧಿಪತಿಗೆ ವರದಿಮಾಡತಕ್ಕದ್ದು.

(8) ಪ್ರಶಾಸನಸಭೆಯು, ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅಗತ್ಯಪಡಿಸಬಹುದಾದಂತೆ, ವಿಶ್ವವಿದ್ಯಾಲಯದ ಆಡಳಿತಕ್ಕೆ ಸಂಬಂಧಪಡುವಂಥ ವಿವರಣ ಪಟ್ಟಿಗಳು, ತಃಖ್ತೆಗಳು, ಲೆಕ್ಕಪತ್ರಗಳು ಅಥವಾ ಇತರ ವಿವರಗಳನ್ನು ಸಲ್ಲಿಸತಕ್ಕದ್ದು.

**9. ನಿರ್ದೇಶನಗಳನ್ನು ನೀಡಲು ಅಧಿಕಾರ.–** ಕುಲಾಧಿಪತಿಯು, ತಾನಾಗಿಯೇ ಅಥವಾ ರಾಜ್ಯ ಸರ್ಕಾರದ ಶಿಫಾರಸಿನ ಮೇಲೆ, ವಿಶ್ವವಿದ್ಯಾಲಯದ ಆಡಳಿತ ಮತ್ತು ವಿದ್ಯಾವಿಷಯಕ ಕಾರ್ಯನಿರ್ವಹಣೆಯ ಮತ್ತು ವಿಶೇಷವಾಗಿ ಶಾಂತಿ ಮತ್ತು ನೆಮ್ಮದಿಯನ್ನು ಕಾಯ್ದುಕೊಂಡುಬರುವ ದೃಷ್ಟಿಯಿಂದ ಹಾಗೂ ಸ್ವತ್ತು ಮತ್ತು ಹಣಕಾಸು ವ್ಯವಸ್ಥೆಯನ್ನು ಸಂರಕ್ಷಿಸುವುದಕ್ಕಾಗಿ ಅವಶ್ಯಕ ಅಥವಾ ಯುಕ್ತವಾಗಬಹುದಾದಂಥ ನಿರ್ದೇಶನಗಳನ್ನು ನೀಡಬಹುದು.

**10. ವಿಶ್ವವಿದ್ಯಾಲಯದ ಆದೇಶಗಳನ್ನು ರದ್ದುಗೊಳಿಸಲು ಅಧಿಕಾರ.–** (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ, ಈ ಅಧಿನಿಯಮದ ಅಥವಾ ಶಾಸನಗಳು, ವಿನಿಯಮಗಳು ಅಥವಾ ಪರ್ಯಾದೇಶಗಳ ಉಪಬಂಧಗಳಿಗೆ ಸುಸಂಗತವಾಗಿಲ್ಲವೆಂದು ಅಥವಾ ಅನ್ಯಥಾ ರಾಜ್ಯಸರ್ಕಾರದ ಕಾರ್ಯನೀತಿಗೆ ಅಸಂಗತವಾಗಿದೆಯೆಂದು

ತಾನು ಅಭಿಪ್ರಾಯಪಡುವ ಯಾವುದೇ ಆದೇಶ, ಅಧಿಸೂಚನೆ, ಠರಾವು ಅಥವಾ ಯಾವುವೇ ವ್ಯವಹರಣೆಗಳನ್ನು ರದ್ದುಗೊಳಿಸಬಹುದು:

ಪರಂತು, ಅಂಥ ಯಾವುದೇ ಆದೇಶವನ್ನು ಮಾಡುವುದಕ್ಕೆ ಮೊದಲು ರಾಜ್ಯ ಸರ್ಕಾರವು, ವಿಶ್ವವಿದ್ಯಾಲಯಕ್ಕೆ ತನ್ನ ಅಹವಾಲು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಡತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಿದ ಪ್ರತಿಯೊಂದು ಆದೇಶವನ್ನು ಅದನ್ನು ಹೊರಡಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯವಿಧಾನಮಂಡಲದ ಉಭಯಸದನಗಳ ಮುಂದೆ ಮಂಡಿಸತಕ್ಕದ್ದು.

## ಅಧ್ಯಾಯ – III
## ವಿಶ್ವವಿದ್ಯಾಲಯದ ಅಧಿಕಾರಿಗಳು

**11. ವಿಶ್ವವಿದ್ಯಾಲಯದ ಅಧಿಕಾರಿಗಳು.**– ಈ ಕೆಳಕಂಡವರು ವಿಶ್ವವಿದ್ಯಾಲಯದ ಅಧಿಕಾರಿಗಳಾಗಿರತಕ್ಕದ್ದು ಎಂದರೆ:–

(i) ಕುಲಾಧಿಪತಿ;

(ii) ಸಹಕುಲಾಧಿಪತಿ;

(iii) ಕುಲಪತಿ;

(iv) ಕುಲಸಚಿವ;

(v) ಕುಲಸಚಿವ (ಮೌಲ್ಯಮಾಪನ);

(vi) ಹಣಕಾಸು ಅಧಿಕಾರಿ;

(vii) ಶಾಸನಗಳ ಮೂಲಕ ವಿಶ್ವವಿದ್ಯಾಲಯದ ಅಧಿಕಾರಿಗಳೆಂದು ಘೋಷಿಸಬಹುದಾದಂಥ ಇತರ ಅಧಿಕಾರಿಗಳು.

**12. ಕುಲಾಧಿಪತಿ.**–(1) ಕರ್ನಾಟಕದ ರಾಜ್ಯಪಾಲರು ತಮ್ಮ ಹುದ್ದೆಯ ಬಲದಿಂದಾಗಿ ವಿಶ್ವವಿದ್ಯಾಲಯದ ಕುಲಾಧಿಪತಿಯಾಗಿರತಕ್ಕದ್ದು.

(2) ಕುಲಾಧಿಪತಿಯವರು ವಿಶ್ವವಿದ್ಯಾಲಯದ ಮುಖ್ಯಸ್ಥರಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ಘಟಿಕೋತ್ಸವಗಳ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ವಿಶ್ವವಿದ್ಯಾಲಯವು, ಕುಲಾಧಿಪತಿಯವರ ಪೂರ್ವ ಅನುಮೋದನೆ ಪಡೆಯದೆ ಯಾವ ವ್ಯಕ್ತಿಗೂ ಯಾವುದೇ ಗೌರವ ಪದವಿಯನ್ನು ನೀಡತಕ್ಕದ್ದಲ್ಲ.

(4) ಕುಲಾಧಿಪತಿಯವರು ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ತಮಗೆ ಪ್ರದತ್ತವಾಗಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**13. ಸಹಕುಲಾಧಿಪತಿ.**– (1) ಕರ್ನಾಟಕದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಖಾತೆಯ ಪ್ರಭಾರದ ಸಚಿವರು ತಮ್ಮ ಹುದ್ದೆಯ ಬಲದಿಂದಾಗಿ ಸಹಕುಲಾಧಿಪತಿಗಳಾಗಿರತಕ್ಕದ್ದು.

(2) ಸಹಕುಲಾಧಿಪತಿಯವರು, ಕುಲಾಧಿಪತಿಯವರ ಅನುಪಸ್ಥಿತಿಯಲ್ಲಿ ವಿಶ್ವವಿದ್ಯಾಲಯದ ಘಟಿಕೋತ್ಸವದ ಅಧ್ಯಕ್ಷತೆ ವಹಿಸತಕ್ಕದ್ದು.

(3) ಸಹಕುಲಾಧಿಪತಿಯವರು ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ಅಥವಾ ಶಾಸನಗಳ ಅಡಿಯಲ್ಲಿ ತಮಗೆ ಪ್ರದತ್ತವಾಗಬಹುದಾದಂಥ ಕುಲಾಧಿಪತಿಯವರ ಅಧಿಕಾರಗಳು ಮತ್ತು ಪ್ರಕಾರ್ಯಗಳನ್ನು ಚಲಾಯಿಸತಕ್ಕದ್ದು. ಕುಲಾಧಿಪತಿಯವರು, ಸಹಕುಲಾಧಿಪತಿಯವರಿಗೆ ಲಿಖಿತ ಆದೇಶದ ಮೂಲಕ ಪ್ರತ್ಯಾಯೋಜಿಸಬಹುದಾದಂಥ ಕುಲಾಧಿಪತಿಯವರ ಅಧಿಕಾರಗಳನ್ನು ಸಹ ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ಸಹ ನಿರ್ವಹಿಸತಕ್ಕದ್ದು ಮತ್ತು ಅಂಥ ಪ್ರತ್ಯಾಯೋಜನೆಯು ಆ ಆದೇಶದಲ್ಲಿ ನಿರ್ದಿಷ್ಟಪಡಿಸಿದಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೊಳಪಟ್ಟಿರತಕ್ಕದ್ದು.

**14. ಕುಲಪತಿಯವರು.**– (1) ಕುಲಪತಿಯವರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ಅವರು ರಾಜ್ಯಸರ್ಕಾರವು ರಚಿಸಿದ ಈ ಮುಂದಿನ ವ್ಯಕ್ತಿಗಳನ್ನು , ಎಂದರೆ:–

(i) ಕುಲಾಧಿಪತಿಯವರ ಒಬ್ಬ ನಾಮನಿರ್ದೇಶಿತರು;

(ii) ಅಧ್ಯಕ್ಷರು, ವಿಶ್ವವಿದ್ಯಾಲಯ ಅನುದಾನ ಆಯೋಗ ಅಥವಾ ಅವರ ನಾಮನಿರ್ದೇಶಿತರು

(iii) ರಾಜ್ಯ ಸರ್ಕಾರದ ಒಬ್ಬ ನಾಮನಿರ್ದೇಶಿತರು;

(iv) ಪ್ರಶಾಸನ ಸಭೆಯ ಒಬ್ಬ ನಾಮನಿರ್ದೇಶಿತರು;

– ಇವರುಗಳನ್ನು ಒಳಗೊಂಡ ಶೋಧನಾ ಸಮಿತಿಯು ತಯಾರಿಸಿದ ಕಾನೂನಿನ ಖ್ಯಾತ ವಿದ್ವಾಂಸರ ಪಟ್ಟಿಯಿಂದ ಕುಲಾಧಿಪತಿಯವರು ನೇಮಕಮಾಡಿದವರಾಗಿರತಕ್ಕದ್ದು:

ಪರಂತು ಕುಲಾಧಿಪತಿಯವರು ಶೋಧನಾ ಸಮಿತಿಯ ಸದಸ್ಯರ ಪೈಕಿಯಿಂದ ಒಬ್ಬರನ್ನು ಅಧ್ಯಕ್ಷರಾಗಿ ಕೆಲಸ ನಿರ್ವಹಿಸಲು ನಾಮನಿರ್ದೇಶಿಸತಕ್ಕದ್ದು. ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳು ಶೋಧನಾ ಸಮಿತಿಯ ಸಂಚಾಲಕರಾಗಿರತಕ್ಕದ್ದು.

(2) ರಾಜ್ಯಸರ್ಕಾರದ, ವಿಶ್ವವಿದ್ಯಾಲಯದ ಅಥವಾ ವಿಶ್ವವಿದ್ಯಾಲಯಕ್ಕೆ ಸಂಯೋಜಿತವಾದ ಯಾವುದೇ ಕಾಲೇಜಿನ ಅಥವಾ ಸಂಸ್ಥೆಯ ವ್ಯವಹಾರಗಳೊಂದಿಗೆ ಸಂಬಂಧವಿರುವ ಯಾವ ವ್ಯಕ್ತಿಯನ್ನೂ ಶೋಧನಾ ಸಮಿತಿಯ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡತಕ್ಕದ್ದಲ್ಲ.

(3) ಶೋಧನಾ ಸಮೀತಿಯು ರಾಜ್ಯ ಸರ್ಕಾರಕ್ಕೆ ಮೂವರು ಖ್ಯಾತ ವಿದ್ವಾಂಸರ ಹೆಸರಿನ ಒಂದು ಪಟ್ಟಿಯನ್ನು ಅಕಾರಾದಿ ಕ್ರಮದಲ್ಲಿ ಕಳುಹಿಸಿಕೊಡತಕ್ಕದ್ದು ರಾಜ್ಯ ಸರ್ಕಾರವು ಆ ಪಟ್ಟಿಯನ್ನು ಕುಲಾಧಿಪತಿಗಳಿಗೆ ಕಳುಹಿಸಿಕೊಡತಕ್ಕದ್ದು ಅವರು ಅರ್ಹತೆ, ಸಮದರ್ಶಿತ್ವ ಮತ್ತು ಸಾಮಾಜಿಕ ನ್ಯಾಯ ಇವುಗಳನ್ನು ಗಮನದಲ್ಲಿಟ್ಟುಕೊಂಡು ಮತ್ತು ರಾಜ್ಯ ಸರ್ಕಾರದ ಸಹಮತಿಯೊಂದಿಗೆ ಪಟ್ಟಿಯಲ್ಲಿರುವ ಒಬ್ಬ ವ್ಯಕ್ತಿಯನ್ನು ಕುಲಪತಿಯಾಗಿ ನೇಮಿಸತಕ್ಕದ್ದು ;

ಪರಂತು, ಕುಲಾಧಿಪತಿಗಳು ರಾಜ್ಯ ಸರ್ಕಾರದ ಸಹಮತಿಯೊಂದಿಗೆ ಅವಶ್ಯವಿದೆ ಎಂದು ಕಂಡು ಬಂದರೆ ಎರಡನೇ ಪಟ್ಟಿಯನ್ನು ಕೋರಬಹುದು ಮತ್ತು ಶೋಧನಾ ಸಮಿತಿಯು ಎರಡನೇ ಪಟ್ಟಿಯನ್ನು ಸಲ್ಲಿಸತಕ್ಕದ್ದು, ಅದೇ ಅಂತಿಮವಾಗಿರಬೇಕು.

(4) (3)ನೇ ಉಪ ಪ್ರಕರಣದಲ್ಲಿ ಏನೇ ಇದ್ದರೂ, ವಿಶ್ವವಿದ್ಯಾಲಯದ ಮೊದಲ ಕುಲಪತಿಯವರನ್ನು ರಾಜ್ಯ ಸರ್ಕಾರದ ಶಿಫಾರಸ್ಸಿನ ಮೇಲೆ ಕುಲಾಧಿಪತಿಯವರು ನೇಮಕ ಮಾಡತಕ್ಕದ್ದು.

(5) ಕುಲಪತಿಯವರು ನಾಲ್ಕು ವರ್ಷಗಳವರೆಗೆ ಅಥವಾ ಅವರಿಗೆ 65 ವರ್ಷಗಳಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಆ ಅವಧಿಯವರೆಗೆ ಪದಧಾರಣೆಯನ್ನು ಮಾಡತಕ್ಕದ್ದು. ಅವರು ಪುನರ್ ನೇಮಕಾತಿಗೆ ಅರ್ಹರಾಗಿರತಕ್ಕದ್ದಲ್ಲ.

(6) ಕುಲಪತಿಯವರನ್ನು, ಈ ಅಧಿನಿಯಮದ ಉಪಬಂಧಗಳನ್ನು ಕಾರ್ಯಗತಗೊಳಿಸುವುದನ್ನು ಉದ್ದೇಶಪೂರ್ವಕವಾಗಿ ಕೈಬಿಟ್ಟಿದ್ದಾರೆ ಅಥವಾ ಕಾರ್ಯಗತಗೊಳಿಸಲು ನಿರಾಕರಿಸಿದ್ದಾರೆ ಅಥವಾ ಅವರಲ್ಲಿ ನಿಹಿತವಾದ, ಅಧಿಕಾರಗಳನ್ನು ದುರುಪಯೋಗಪಡಿಸಿಕೊಂಡಿದ್ದಾರೆ ಎಂಬ ಕಾರಣದ ಮೇಲೆ ಮತ್ತು ರಾಜ್ಯ ಸರ್ಕಾರವು (7)ನೇ ಉಪ ಪ್ರಕರಣದ ಅಡಿಯಲ್ಲಿ ತಾನು ಆದೇಶಿಸಿದ್ದ ಒಂದು ವಿಚಾರಣೆಯ ವರದಿಯನ್ನು ಪರಿಗಣಿಸಿದ ನಂತರ ನೀಡಿದ ಸಲಹೆಯ ಮೇಲೆ ಕುಲಾಧಿಪತಿಯವರು ಹೊರಡಿಸಿದ ಆದೇಶದ ಮೂಲಕವಾಗಿ ಅಲ್ಲದೆ, ಅವರ ಅಧಿಕಾರಸ್ಥಾನದಿಂದ ತೆಗೆದುಹಾಕತಕ್ಕದ್ದಲ್ಲ.

(7) ಈ ಪ್ರಕರಣದ ಅಡಿಯಲ್ಲಿ ಒಂದು ವಿಚಾರಣೆಯನ್ನು ನಡೆಸುವ ಉದ್ದೇಶಕ್ಕಾಗಿ, ರಾಜ್ಯಸರ್ಕಾರವು, ಉಚ್ಚ ನ್ಯಾಯಾಲಯದ ಅಥವಾ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿರುವ ಅಥವಾ ಆಗಿದ್ದ ವ್ಯಕ್ತಿಯನ್ನು ನೇಮಕ ಮಾಡತಕ್ಕದ್ದು. ವಿಚಾರಣಾ ಪ್ರಾಧಿಕಾರವು, ಕುಲಪತಿಯವರಿಗೆ ತಮ್ಮ ಮನವಿಯನ್ನು ಸಲ್ಲಿಸಲು ಅವಕಾಶ ನೀಡಿದ ನಂತರ ವಿಚಾರಣೆ ನಡೆಸತಕ್ಕದ್ದು ಮತ್ತು ವಿಧಿಸಬೇಕಾದ ಯಾವುದೇ ದಂಡನೆ ಇದ್ದರೆ, ಅದೂ ಒಳಗೊಂಡಂತೆ ತೆಗೆದುಕೊಳ್ಳಬೇಕಾದ ಕ್ರಮದ ಬಗ್ಗೆ ಒಂದು ವರದಿಯನ್ನು ರಾಜ್ಯಸರ್ಕಾರಕ್ಕೆ ಸಲ್ಲಿಸತಕ್ಕದ್ದು. ರಾಜ್ಯಸರ್ಕಾರವು, ವರದಿಯನ್ನು ಪರಿಶೀಲಿಸಿದ ನಂತರ, ಕುಲಾಧಿಪತಿಯವರಿಗೆ ಸಲಹೆ ನೀಡತಕ್ಕದ್ದು. ಕುಲಾಧಿಪತಿಯವರು ಸಾಧ್ಯವಾದಷ್ಟುಮಟ್ಟಿಗೆ ಆರು ತಿಂಗಳೊಳಗಾಗಿ ಅಂಥ ಸಲಹೆಗೆ ಅನುಸಾರವಾಗಿ ಕ್ರಮ ಕೈಗೊಳ್ಳತಕ್ಕದ್ದು.

(8) ಕುಲಪತಿಯವರ ಉಪಲಬ್ಧಿಗಳು ಮತ್ತು ಇತರ ಸೇವಾ ಷರತ್ತುಗಳು ಕುಲಾಧಿಪತಿಯವರು ನಿರ್ಧರಿಸಬಹುದಾದಂತೆ ಇರತಕ್ಕದ್ದು ಮತ್ತು ಅವುಗಳನ್ನು ಅವರು ಕುಲಪತಿಯಾಗಿ ನೇಮಕವಾದ ತರುವಾಯ ಅವರಿಗೆ ಅನಾನುಕೂಲವಾಗುವಂತೆ ಬದಲಾಯಿಸತಕ್ಕದ್ದಲ್ಲ. ಕುಲಪತಿಯಾಗಿ ತಮ್ಮ ಅಧಿಕಾರಾವಧಿಯಲ್ಲಿರುವಾಗ ಕುಲಪತಿಯವರು ವಯೋನಿವೃತ್ತಿಯ ಮೇಲೆ ನಿವೃತ್ತರಾಗುವ ಸಂದರ್ಭದಲ್ಲಿ, ಈಗಾಗಲೇ ನಿರ್ಧರಿಸಲಾದ ಅವರ ಸೇವಾ ಷರತ್ತುಗಳು ಮುಂದುವರಿಯತಕ್ಕದ್ದು. ಅವರ ಎಲ್ಲ ನಿವೃತ್ತಿ ಸೌಲಭ್ಯಗಳನ್ನು ತಡೆಹಿಡಿಯತಕ್ಕದ್ದು, ಅವುಗಳನ್ನು ಅವರು ಕುಲಪತಿಯಾಗಿ ತಮ್ಮ ಅಧಿಕಾರ ಸ್ಥಾನವನ್ನು ತ್ಯಜಿಸಿದ ನಂತರ ಬಿಡುಗಡೆ ಮಾಡತಕ್ಕದ್ದು.

(9) ಕುಲಪತಿಯವರು ಕುಲಾಧಿಪತಿಯವರಿಗೆ ರಾಜೀನಾಮೆ ಪತ್ರವನ್ನು ಬರೆದು ಅದಕ್ಕೆ ತನ್ನ ಸಹಿ ಹಾಕಿ ತಾನು ಬಿಡುಗಡೆಗೊಳ್ಳಲು ಇಚ್ಛಿಸುವ ದಿನಾಂಕದಿಂದ ಸಾಮಾನ್ಯವಾಗಿ ಅರವತ್ತು ದಿನಗಳಿಗೆ ಮೊದಲು ಅದನ್ನು ಕುಲಾಧಿಪತಿಯವರಿಗೆ

ಕಳುಹಿಸುವ ಮೂಲಕ ತನ್ನ ಸ್ಥಾನವನ್ನು ತ್ಯಜಿಸಬಹುದು. ಆದರೆ ಕುಲಾಧಿಪತಿಯವರು ಅವರನ್ನು ಅದಕ್ಕೂ ಮೊದಲೇ ಬಿಡುಗಡೆಗೊಳಿಸಬಹುದು.

(10) ಕುಲಪತಿಯವರ ಹುದ್ದೆಯು ತಾತ್ಕಾಲಿಕವಾಗಿ ಖಾಲಿಯಾದಲ್ಲಿ ಅಥವಾ ಅವರು ರಜೆಯ ಕಾರಣದಿಂದಾಗಿ ಅಥವಾ ಇನ್ನಾವುದೇ ಕಾರಣಗಳಿಗಾಗಿ ಗೈರುಹಾಜರಾದಲ್ಲಿ ವಿಶ್ವವಿದ್ಯಾಲಯದ ಅತ್ಯಂತ ಹಿರಿಯ ಪ್ರಾಧ್ಯಾಪಕರು, ಕುಲಾಧಿಪತಿಯವರ ಅನುಮೋದನೆ ಪಡೆದು ಕುಲಪತಿಯವರ ಕರ್ತವ್ಯಗಳನ್ನು 6 ತಿಂಗಳುಗಳನ್ನು ಮೀರದ ಅವಧಿಯವರೆಗೆ ನಿರ್ವಹಿಸಬಹುದು.

(11) ನಿವೃತ್ತರಾದ ಒಬ್ಬ ವ್ಯಕ್ತಿಯು, ಕುಲಪತಿಯಾಗಿ ನೇಮಕಗೊಂಡರೆ, ಅವರು ಕುಲಪತಿಯಾಗಿ ನೇಮಕಗೊಂಡ ಮೇಲೆ, ಅವರ ಉಪಲಬ್ಧಿಗಳೂ ಸೇರಿದಂತೆ ಅವರ ಸೇವಾ ನಿಬಂಧನೆ ಮತ್ತು ಷರತ್ತುಗಳನ್ನು ಕುಲಾಧಿಪತಿಯವರು ನಿರ್ಣಯಿಸತಕ್ಕದ್ದು. ಅವರು ಪಡೆಯುವ ನಿವೃತ್ತಿ ವೇತನದ ಮೊತ್ತವನ್ನು ಮತ್ತು ಭತ್ಯಗಳನ್ನು ಅವರ ಉಪಲಬ್ಧಿಗಳಿಂದ ಕಳೆಯತಕ್ಕದ್ದು.

(12) ರಾಜ್ಯದಲ್ಲಿನ ಒಂದು ವಿಶ್ವವಿದ್ಯಾಲಯದ ಸೇವೆಯಲ್ಲಿರುವ ಒಬ್ಬ ಪ್ರಾಧ್ಯಾಪಕರು, ಕುಲಪತಿಯಾಗಿ ನೇಮಕ ಮಾಡಿದರೆ, ಅವರು ಕುಲಪತಿಯಾಗಿರುವ ಅಧಿಕಾರಾವಧಿಯಲ್ಲಿ ಪ್ರಾಧ್ಯಾಪಕರಾಗಿ ಅವರ ಸೇವಾ ನಿಬಂಧನೆ ಮತ್ತು ಷರತ್ತುಗಳನ್ನು ಅವರಿಗೆ ಅನಾನುಕೂಲವಾಗುವಂತೆ ಪರಿಷ್ಕರಿಸತಕ್ಕದ್ದಲ್ಲ ಮತ್ತು ಅವರು ತಮ್ಮ ಹುದ್ದೆಯ ಧಾರಣಾಧಿಕಾರವನ್ನು ಉಳಿಸಿಕೊಳ್ಳತಕ್ಕದ್ದು.

**15. ಕುಲಪತಿಯವರ ಅಧಿಕಾರಗಳು.-** (1) ಕುಲಪತಿಯವರು, ವಿಶ್ವವಿದ್ಯಾಲಯದ ಪ್ರಧಾನ ಕಾರ್ಯನಿರ್ವಾಹಕ ಅಧಿಕಾರಿ ಮತ್ತು ಶೈಕ್ಷಣಿಕ ವಿಷಯಗಳ ಮುಖ್ಯಸ್ಥರಾಗಿರತಕ್ಕದ್ದು ಮತ್ತು ವಿಶ್ವವಿದ್ಯಾಲಯದ ವ್ಯವಹಾರಗಳ ಮೇಲ್ವಿಚಾರಣೆ ಹಾಗೂ ನಿಯಂತ್ರಣವನ್ನು ನಡೆಸತಕ್ಕದ್ದು ಮತ್ತು ವಿಶ್ವವಿದ್ಯಾಲಯದ ಪ್ರಾಧಿಕಾರಗಳ ತೀರ್ಮಾನಗಳನ್ನು ಜಾರಿಗೊಳಿಸತಕ್ಕದ್ದು. ವಿಶ್ವವಿದ್ಯಾಲಯದಲ್ಲಿ ಶಿಸ್ತುಪಾಲನೆಗೆ ಅವಶ್ಯವಾದ ಎಲ್ಲಾ ಅಧಿಕಾರಗಳನ್ನು ಅವರು ಹೊಂದಿರತಕ್ಕದ್ದು.

(2) ಕುಲಪತಿಯವರು, ಪ್ರಶಾಸನ ಸಭೆಯ, ಪ್ರಶಿಕ್ಷಣ ಪರಿಷತ್ತಿನ ಮತ್ತು ಹಣಕಾಸು ಸಮಿತಿಯ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು.

(3) ಕುಲಪತಿಯವರು, ಶಾಸನಗಳ ಮತ್ತು ಪರ್ಯಾದೇಶಗಳ ಮೂಲಕ ನಿಯಮಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

(4) ಕುಲಪತಿಯವರು, ಈ ಅಧಿನಿಯಮದ ಉಪಬಂಧಗಳು, ಶಾಸನಗಳು, ಪರ್ಯಾದೇಶಗಳು ಮತ್ತು ವಿನಿಯಮಗಳು ಕಟ್ಟುನಿಟ್ಟಾಗಿ ಪಾಲನೆಯಾಗುವಂತೆ ನೋಡಿಕೊಳ್ಳತಕ್ಕದ್ದು.

(5) ಕುಲಪತಿಯವರು, ಪ್ರಶಾಸನ ಸಭೆಯ ಮತ್ತು ಪ್ರಶಿಕ್ಷಣ ಪರಿಷತ್ತಿನ ಸಭೆಗಳನ್ನು ಕರೆಯತಕ್ಕದ್ದು ಮತ್ತು ಸದರಿ ಸಭೆಗಳನ್ನು ಕರೆಯುವ ಅಧಿಕಾರವನ್ನು ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿಗೆ ಲಿಖಿತ ಆದೇಶದ ಮೂಲಕ ಪ್ರತ್ಯಾಯೋಜಿಸಬಹುದು.

(6) ಕುಲಪತಿಯು, ಯಾವುದೇ ವಿಷಯದ ಮೇಲೆ ತಕ್ಷಣದ ಕ್ರಮವು ಅವಶ್ಯವೆಂದು ಅಭಿಪ್ರಾಯಪಟ್ಟರೆ, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರಕ್ಕೆ ಪ್ರದತ್ತವಾದ ಯಾವುದೇ ಅಧಿಕಾರವನ್ನು ಚಲಾಯಿಸಬಹುದು ಮತ್ತು ಅಂಥ ವಿಷಯದ ಮೇಲೆ ತಾನು ಕೈಗೊಂಡ ಕ್ರಮದ ಬಗ್ಗೆ ಅಂಥ ಪ್ರಾಧಿಕಾರಕ್ಕೆ ವರದಿ ಸಲ್ಲಿಸತಕ್ಕದ್ದು:

ಪರಂತು, ಅಂಥ ಕ್ರಮವನ್ನು ಕೈಗೊಳ್ಳಬಾರದಿತ್ತೆಂದು ಸಂಬಂಧಪಟ್ಟ ಪ್ರಾಧಿಕಾರವು ಅಭಿಪ್ರಾಯಪಟ್ಟರೆ, ಅದು ಆ ವಿಷಯವನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಅದರ ಮೇಲೆ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

(7) ಕುಲಪತಿಯವರು,-

(ಎ) ವಿಶ್ವವಿದ್ಯಾಲಯದ ಸೂಕ್ತ ಆಡಳಿತ ನಿರ್ವಹಣೆ ಮತ್ತು ಬೋಧನೆ, ಸಂಶೋಧನೆ ಹಾಗೂ ಜ್ಞಾನ ಪ್ರಸಾರದ ನಿಕಟ ಸಮನ್ವಯ ಮತ್ತು ಸಂಯೋಜನೆಗೆ;

(ಬಿ) ಪ್ರಶಾಸನ ಸಭೆಗೆ ವಾರ್ಷಿಕ ಹಣಕಾಸುಗಳು ಮತ್ತು ವಾರ್ಷಿಕ ಲೆಕ್ಕಪತ್ರಗಳು ಮತ್ತು ಜಮಾ-ಖರ್ಚು ಪಟ್ಟಿಯನ್ನು ಮಂಡಿಸುವುದಕ್ಕೆ,

- ಜವಾಬ್ದಾರರಾಗಿರತಕ್ಕದ್ದು.

**16. ಕುಲಪತಿಯವರ ಸ್ಥಾನವು ಖಾಲಿಯಿರುವಾಗ ಕೆಲಸದ ವ್ಯವಸ್ಥೆ.–** (1) ರಜೆ, ಖಾಯಿಲೆ ಅಥವಾ ಇನ್ನಾವುದೇ ಕಾರಣದಿಂದಾಗಿ ಕುಲಪತಿಯವರ ತಾತ್ಕಾಲಿಕ ಗೈರುಹಾಜರಿಯಲ್ಲಿ, ಕುಲಾಧಿಪತಿಯವರು, ಕುಲಪತಿಯವರ ಕರ್ತವ್ಯಗಳನ್ನು ನಡೆಸಿಕೊಂಡು ಹೋಗುವುದಕ್ಕೆ ತಾನು ಸೂಕ್ತವೆಂದು ಭಾವಿಸುವಂಥ ವ್ಯವಸ್ಥೆಯನ್ನು ಮಾಡಬಹುದು:

ಪರಂತು, ಕುಲಾಧಿಪತಿಯವರು ಅಂಥ ವ್ಯವಸ್ಥೆಯನ್ನು ಮಾಡುವವರೆಗೆ ಕುಲಪತಿಯವರು ಒಂದು ತಿಂಗಳು ಮೀರದಂಥ ಅವಧಿಗೆ ಅಥವಾ ಕುಲಾಧಿಪತಿಯವರು ವ್ಯವಸ್ಥೆ ಮಾಡುವವರೆಗೆ, ಅವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ, ವಿಶ್ವವಿದ್ಯಾಲಯದಲ್ಲಿ ಇರುವಂಥ ಅತ್ಯಂತ ಹಿರಿಯ ಡೀನ್ ಅವರನ್ನು ಕುಲಪತಿಯವರ ಪ್ರಸಕ್ತ ಕರ್ತವ್ಯಗಳ ಪ್ರಭಾರವಹಿಸಲು ಹೆಸರಿಸಬಹುದು.

(2) ಕುಲಪತಿಯವರ ಸ್ಥಾನವು ಭರ್ತಿಯಾಗದೆ ಖಾಲಿ ಉಳಿದಿರುವ ಅವಧಿಯವರೆಗೆ, ಕುಲಾಧಿಪತಿಯವರು ನೇಮಿಸಬಹುದಾದಂಥ, ವಿಶ್ವವಿದ್ಯಾಲಯದಲ್ಲಿ ಇರುವ ಅತ್ಯಂತ ಹಿರಿಯ ಡೀನ್ ಅವರು ಕುಲಪತಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು ಮತ್ತು ಹಾಗೆ ನೇಮಕಗೊಂಡ ವ್ಯಕ್ತಿಯು, ಕುಲಪತಿಯವರ ಎಲ್ಲಾ ಅಧಿಕಾರಗಳನ್ನು ಹೊಂದಿರತಕ್ಕದ್ದು ಮತ್ತು ಎಲ್ಲಾ ವಿಶೇಷಾಧಿಕಾರಗಳಿಗೂ ಹಾಗೂ ಈ ಕುರಿತು ರಚಿಸಲಾದ ಶಾಸನಗಳಾವುವಾದರೂ ಇದ್ದಲ್ಲಿ, ಅವುಗಳಿಗನ್ವಯ ಕುಲಾಧಿಪತಿಯವರು ನಿರ್ಧರಿಸಬಹುದಾದಂಥ ಉಪಲಬ್ಧಿಗಳು ಮತ್ತು ಭತ್ಯೆಗಳಿಗೂ ಹಕ್ಕುಳ್ಳವರಾಗಿರತಕ್ಕದ್ದು.

**17. ಕುಲಸಚಿವರು.–** (1) ಕುಲಸಚಿವರು ವಿಶ್ವವಿದ್ಯಾಲಯದ ಪೂರ್ಣ ಕಾಲಿಕ ಅಧಿಕಾರಿಯಾಗಿರತಕ್ಕದ್ದು.

(2) ರಾಜ್ಯ ಸರ್ಕಾರವು, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಅಥವಾ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳ ದರ್ಜೆಗಿಂತ ಕಡಿಮೆಯಿಲ್ಲದ ಒಬ್ಬರು ಅಧಿಕಾರಿಯನ್ನು ಅಥವಾ ಅಖಿಲ ಭಾರತ ಸೇವೆಗಳಿಗೆ ಸೇರಿರುವ ಗರಿಷ್ಠ ಕಾಲ ಶ್ರೇಣಿಯಲ್ಲಿ (ಸೂಪರ ಟೈಂ ಸ್ಕೇಲ್) ಕಾರ್ಯ ನಿರ್ವಹಿಸುತ್ತಿರುವ ಒಬ್ಬರು ಅಧಿಕಾರಿಯನ್ನು ವಿಶ್ವವಿದ್ಯಾಲಯದ ಕುಲಸಚಿವರನ್ನಾಗಿ ನೇಮಿಸಬಹುದು.

(3) ಕುಲಸಚಿವರ ಸ್ಥಾನವು ಖಾಲಿಯಾಗಿದ್ದಾಗ ಅಥವಾ ಕುಲಸಚಿವರು ಅನಾರೋಗ್ಯದ, ಗೈರುಹಾಜರಿಯ ಅಥವಾ ಇತರ ಯಾವುದೇ ಕಾರಣದಿಂದ ತನ್ನ ಹುದ್ದೆಯ ಕರ್ತವ್ಯಗಳನ್ನು ನಿರ್ವಹಿಸಲು ಅಸಮರ್ಥರಾದಾಗ, ಕುಲಸಚಿವರ ಹುದ್ದೆಯ ಕರ್ತವ್ಯಗಳನ್ನು ಈ ಉದ್ದೇಶಕ್ಕಾಗಿ ಕುಲಪತಿಯವರು ನೇಮಕ ಮಾಡಬಹುದಾದ ವ್ಯಕ್ತಿಯು ನಿರ್ವಹಿಸತಕ್ಕದ್ದು.

(4) ಕುಲಸಚಿವರಿಗೆ ಒಬ್ಬರು ಅಥವಾ ಹೆಚ್ಚು ಮಂದಿ ಉಪ ಕುಲಸಚಿವರು ಮತ್ತು ಸಹಾಯಕ ಕುಲಸಚಿವರುಗಳು ಅವರಿಗೆ ಸಹಾಯಕರಾಗಿರಬಹುದು.

**18. ಕುಲಸಚಿವರ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** (1) ಈ ಅಧಿನಿಯಮದಲ್ಲಿ ಅನ್ಯಥಾ ಉಪಬಂಧಿಸಿದುದನ್ನುಳಿದು, ಕುಲಸಚಿವರು ಪ್ರಶಾಸನ ಸಭೆ, ಪ್ರಶಿಕ್ಷಣ ಪರಿಷತ್ತು, ಹಣಕಾಸು ಸಮಿತಿ ಮತ್ತು ಅಧ್ಯಯನ ಮಂಡಳಿಯ ಪದನಿಮಿತ್ತ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

(2) ಈ ಮುಂದಿನವುಗಳು ಕುಲಸಚಿವರ ಕರ್ತವ್ಯಗಳಾಗಿರತಕ್ಕದ್ದು:–

(ಎ) ಕುಲಪತಿಯವರು ಅಥವಾ ಪ್ರಶಾಸನ ಸಭೆಯು ತಮ್ಮ ಪ್ರಭಾರಕ್ಕೆ ಒಪ್ಪಿಸಿದ ವಿಶ್ವವಿದ್ಯಾಲಯದ ದಾಖಲೆಗಳ, ಸಾಮಾನ್ಯ ಮೊಹರಿನ ಮತ್ತು ಇತರ ಸ್ವತ್ತಿನ ಅಭಿರಕ್ಷಕರಾಗಿರತಕ್ಕದ್ದು;

(ಬಿ) ಪ್ರಶಾಸನ ಸಭೆಯ, ಪ್ರಶಿಕ್ಷಣ ಪರಿಷತ್ತಿನ, ಅಧ್ಯಯನ ಮಂಡಳಿಗಳ, ಪರೀಕ್ಷಾ ಮಂಡಳಿಗಳ ಮತ್ತು ವಿಶ್ವವಿದ್ಯಾಲಯದ ಪ್ರಾಧಿಕಾರಗಳು ನೇಮಕಮಾಡಿದ ಯಾವುದೇ ಸಮಿತಿಯ ಸಭೆಗಳನ್ನು ನಡೆಸುವುದಕ್ಕೆ ನೋಟೀಸುಗಳನ್ನು ನೀಡತಕ್ಕದ್ದು;

(ಸಿ) ಪ್ರಶಾಸನ ಸಭೆಯ, ಪ್ರಶಿಕ್ಷಣ ಪರಿಷತ್ತಿನ, ಅಧ್ಯಯನ ಮಂಡಳಿಗಳ, ಪರೀಕ್ಷಕರ ಮಂಡಳಿಗಳ ಮತ್ತು ವಿಶ್ವವಿದ್ಯಾಲಯದ ಪ್ರಾಧಿಕಾರಗಳು ನೇಮಕ ಮಾಡಿದ ಸಮಿತಿಗಳ ಸಭೆಗಳ ಎಲ್ಲಾ ವ್ಯವಹರಣೆಗಳ ಸಭಾ ನಡೆವಳಿಗಳನ್ನು ಇಟ್ಟುಕೊಂಡು ಬರತಕ್ಕದ್ದು;

(ಡಿ) ಪ್ರಶಾಸನ ಸಭೆಯ ಮತ್ತು ಪ್ರಶಿಕ್ಷಣ ಪರಿಷತ್ತಿನ ಅಧಿಕೃತ ಪತ್ರ ವ್ಯವಹಾರಗಳನ್ನು ನಡೆಸತಕ್ಕದ್ದು;

(ಇ) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಸಭೆಗಳ ಕಾರ್ಯಸೂಚಿಯ ಪ್ರತಿಗಳನ್ನು, ಅವುಗಳನ್ನು ಹೊರಡಿಸಿದ ಕೂಡಲೇ ಮತ್ತು ಅಂಥ ಸಭೆಗಳ ಸಭಾ ನಡವಳಿಗಳ ಪ್ರತಿಗಳನ್ನು, ಕುಲಾಧಿಪತಿಯವರಿಗೆ ಕಳುಹಿಸಿಕೊಡತಕ್ಕದ್ದು; ಮತ್ತು

(ಎಫ್) ಶಾಸನಗಳಲ್ಲಿ, ಪರ್ಯಾದೇಶಗಳಲ್ಲಿ ಅಥವಾ ವಿನಿಯಮಗಳಲ್ಲಿ ನಿರ್ದಿಷ್ಟಪಡಿಸಿದ ಅಥವಾ ಪ್ರಶಾಸನ ಸಭೆಯು ಅಥವಾ ಕುಲಪತಿಯವರು ಕಾಲಕಾಲಕ್ಕೆ ಅಗತ್ಯಪಡಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

(3) ವಿಶ್ವವಿದ್ಯಾಲಯವು ಹೂಡುವ ಅಥವಾ ಅದರ ವಿರುದ್ಧ ಹೂಡಲಾಗುವ ಎಲ್ಲಾ ದಾವೆಗಳಲ್ಲಿ ಮತ್ತು ಇತರ ಕಾನೂನು ವ್ಯವಹರಣೆಗಳಲ್ಲಿ ವಾದಪ್ರತಿವಾದ ಪತ್ರಗಳಿಗೆ ಕುಲಸಚಿವರು ಸಹಿ ಮಾಡತಕ್ಕದ್ದು ಮತ್ತು ಅವುಗಳನ್ನು ಸತ್ಯಾಪನೆ ಮಾಡತಕ್ಕದ್ದು ಮತ್ತು ಅಂಥ ದಾವೆಗಳು ಮತ್ತು ವ್ಯವಹರಣೆಗಳಲ್ಲಿನ ಆದೇಶಿಕೆಗಳನ್ನು ಕುಲಸಚಿವರ ಹೆಸರಿಗೆ ಹೊರಡಿಸತಕ್ಕದ್ದು ಮತ್ತು ಅವರಿಗೆ ಜಾರಿಗೊಳಿಸತಕ್ಕದ್ದು.

**19. ಕುಲಸಚಿವ (ಮೌಲ್ಯಮಾಪನ).–** (1) ಕುಲಸಚಿವ (ಮೌಲ್ಯಮಾಪನ) ಹುದ್ದೆಯ ಧಾರಕರು, ಕಾನೂನಿನ ಒಂದು ವಿಭಾಗದಲ್ಲಿ ಪ್ರವಾಚಕರ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಕಾನೂನು ಕ್ಷೇತ್ರದಲ್ಲಿಯ ವಿದ್ವಾಂಸರಾಗಿರತಕ್ಕದ್ದು.

(2) ಕುಲಸಚಿವ (ಮೌಲ್ಯಮಾಪನ), ನಿಯಮಿಸಬಹುದಾದಂಥ ಅವಧಿಗಾಗಿ ಮತ್ತು ಅಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ಪ್ರಶಾಸನ ಸಭೆಯ ಅನುಮೋದನೆಯೊಂದಿಗೆ ಕುಲಪತಿಯು ನೇಮಕ ಮಾಡಿದ ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು.

(3) ಕುಲಸಚಿವ (ಮೌಲ್ಯಮಾಪನ) ನಿಯಮಿಸಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು.

**20. ಹಣಕಾಸು ಅಧಿಕಾರಿ.–** (1) ಹಣಕಾಸು ಅಧಿಕಾರಿಯು, ಲೆಕ್ಕಪರಿಶೋಧನೆ, ಲೆಕ್ಕಪತ್ರ ಮತ್ತು ಹಣಕಾಸು ಆಡಳಿತದಲ್ಲಿ ಅನುಭವವಿರುವ, ರಾಜ್ಯ ಲೆಕ್ಕಪತ್ರಗಳ ಇಲಾಖೆಯ ಜಂಟಿ ನಿಯಂತ್ರಕರ ಕೇಡರ್‌ನಲ್ಲಿನ ಅಧಿಕಾರಿಗಳು ಅಥವಾ ಉಪ–ಮಹಾಲೇಖಾಪಾಲರ ದರ್ಜೆಯ ಅಧಿಕಾರಿಗಳು ಇರುವ ಮೂರು ವ್ಯಕ್ತಿಗಳನ್ನು ಮೀರದ ಹೆಸರುಗಳ ಪಟ್ಟಿಯಿಂದ ಪ್ರಶಾಸನ ಸಭೆಯ ಅನುಮೋದನೆಯೊಂದಿಗೆ ಕುಲಪತಿಯು ನೇಮಕ ಮಾಡುವ ವಿಶ್ವವಿದ್ಯಾನಿಲಯದ ಒಬ್ಬ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು. ಶಾಸನಗಳ ಮೂಲಕ ನಿಯಮಿಸಲಾದ ಸಮಯದೊಳಗೆ ಪಟ್ಟಿಯಲ್ಲಿನ ಯಾರ ಹೆಸರನ್ನೂ ಪ್ರಶಾಸನಸಭೆಯು ಅನುಮೋದಿಸದಿದ್ದರೆ, ಕುಲಾಧಿಪತಿಯು, ಕುಲಪತಿಯೊಂದಿಗೆ ಸಮಾಲೋಚಿಸಿ, ಹಣಕಾಸು ಅಧಿಕಾರಿ ಆಗಿರಲು ಸೂಕ್ತವೆಂದು ತಾವು ಭಾವಿಸುವಂಥ ಇತರ ವ್ಯಕ್ತಿಯನ್ನು ನೇಮಕ ಮಾಡಬಹುದು.

(2) ಹಣಕಾಸು ಅಧಿಕಾರಿಯ ಹುದ್ದೆಯ ಪದಾವಧಿ ಮತ್ತು ಅವನ ಉಪಲಬ್ಧಿಗಳು ಮತ್ತು ಇತರ ನಿಬಂಧನೆಗಳು ಮತ್ತು ಷರತ್ತುಗಳು ಕುಲಾಧಿಪತಿಯು ನಿರ್ಧರಿಸುವಂಥವುಗಳಾಗಿರತಕ್ಕದ್ದು.

(3) ಹಣಕಾಸು ಅಧಿಕಾರಿಯು, ಹಣಕಾಸು ಸಮಿತಿಯ ನಿಯಂತ್ರಣಕ್ಕೊಳಪಟ್ಟು, ಶಾಸನಗಳ, ಪರ್ಯಾದೇಶಗಳ ಮತ್ತು ವಿನಿಯಮಗಳ ಮೂಲಕ ನಿಯಮಿಸಬಹುದಾದಂಥ ಅಥವಾ ಕುಲಪತಿ ಅಥವಾ ಕುಲಸಚಿವರು ಕಾಲ ಕಾಲಕ್ಕೆ ಅಗತ್ಯಪಡಿಸಬಹುದಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು. ಆತನು ವಿದ್ಯಾವಿಷಯಕ ಪರಿಷತ್ತಿನ ಪದನಿಮಿತ್ತ ಸದಸ್ಯನಾಗಿರತಕ್ಕದ್ದು ಮತ್ತು ಹಣಕಾಸು ಸಮಿತಿಯ ಪದನಿಮಿತ್ತ ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು.

**21. ಕುಲಸಚಿವ, ಕುಲಸಚಿವ (ಮೌಲ್ಯಮಾಪನ), ಹಣಕಾಸು ಅಧಿಕಾರಿಯವರ ಹುದ್ದೆಗಳಲ್ಲಿ ತಾತ್ಕಾಲಿಕ ಖಾಲಿಸ್ಥಾನ.–** (1) ಕುಲಸಚಿವ, ಕುಲಸಚಿವ (ಮೌಲ್ಯಮಾಪನ) ಅಥವಾ ಹಣಕಾಸು ಅಧಿಕಾರಿ ಇವರ ಹುದ್ದೆಗಳಲ್ಲಿ ಮರಣ, ಅಮಾನತು ಅಥವಾ ಖಾಯಿಲೆ ಅಥವಾ ಇತರ ಕಾರಣಗಳಿಗಾಗಿ ತಾತ್ಕಾಲಿಕ ಗೈರುಹಾಜರಿಯ ಕಾರಣದಿಂದಾಗಿ ತಾತ್ಕಾಲಿಕ ಖಾಲಿಸ್ಥಾನ ಉಂಟಾದ ಸಂದರ್ಭದಲ್ಲಿ ಕುಲಾಧಿಪತಿಯವರು ವಿಶ್ವವಿದ್ಯಾಲಯದ ಯಾವೊಬ್ಬ ಇತರ ಸೂಕ್ತ ಅಧಿಕಾರಿಗೆ ಸಂದರ್ಭಾನುಸಾರವಾಗಿ ಕುಲಸಚಿವ, ಕುಲಸಚಿವ (ಮೌಲ್ಯಮಾಪನ) ಅಥವಾ ಹಣಕಾಸು ಅಧಿಕಾರಿಯವರ ಕರ್ತವ್ಯಗಳನ್ನು ನೆರವೇರಿಸಲು ಅಧಿಕಾರ ನೀಡಬಹುದು.

(2) ಕುಲಸಚಿವ, ಕುಲಸಚಿವ (ಮೌಲ್ಯಮಾಪನ) ಅಥವಾ ಹಣಕಾಸು ಅಧಿಕಾರಿಯ ಹುದ್ದೆಯ ಖಾಲಿಸ್ಥಾನವನ್ನು ಭರ್ತಿ ಮಾಡಲು ಒಬ್ಬ ಸೂಕ್ತ ಅಧಿಕಾರಿಯನ್ನು ಕುಲಾಧಿಪತಿಗಳು ನೇಮಕಮಾಡುವವರೆಗೂ, ಕುಲಪತಿಯವರು, ತಮ್ಮ ವಿವೇಚನಾನುಸಾರವಾಗಿ ಯಾವೊಬ್ಬ ಅಧಿಕಾರಿಗೆ ಹಾಗೆ ನೇಮಕ ಮಾಡುವವರೆಗೆ ಆ ಖಾಲಿಸ್ಥಾನದ ಕರ್ತವ್ಯಗಳನ್ನು ನಿರ್ವಹಿಸಲು ಅಧಿಕಾರ ನೀಡಬಹುದು. ಕುಲಪತಿಗಳು ಈ ಪ್ರಕರಣದಡಿಯಲ್ಲಿ ತಾನು ತೆಗೆದುಕೊಂಡ ಕ್ರಮದ ಬಗ್ಗೆ ತಕ್ಷಣವೇ ಕುಲಾಧಿಪತಿಯವರಿಗೆ ವರದಿಮಾಡತಕ್ಕದ್ದು.

**22. ಡೀನ್.–** (1) ಪ್ರತಿಯೊಂದು ಫ್ಯಾಕಲ್ಟಿಯ ಒಬ್ಬ ಪ್ರಾಧ್ಯಾಪಕರು ಜ್ಯೇಷ್ಠತೆಗನುಸಾರವಾಗಿ, ಸುತ್ತು ಸರದಿಯಲ್ಲಿ, ಎರಡು ವರ್ಷಗಳ ಅವಧಿಗೆ, ಆ ಫ್ಯಾಕಲ್ಟಿಯ ಡೀನ್ ಆಗಿ ಕರ್ತವ್ಯ ನಿರ್ವಹಿಸತಕ್ಕದ್ದು:

ಪರಂತು, ಪ್ರಾಧ್ಯಾಪಕರು ಇಲ್ಲದಿದ್ದಲ್ಲಿ, ಅತ್ಯಂತ ಹಿರಿಯ ಪ್ರವಾಚಕರು ಡೀನ್ ಆಗಿ ಕರ್ತವ್ಯ ನಿರ್ವಹಿಸತಕ್ಕದ್ದು:

ಮತ್ತೂ ಪರಂತು, ಯಾವುದೇ ಫ್ಯಾಕಲ್ಟಿಯಲ್ಲಿ ಪ್ರಾಧ್ಯಾಪಕರು ಅಥವಾ ಪ್ರವಾಚಕರು ಇಲ್ಲದಿದ್ದಾಗ ಕುಲಪತಿಯವರು ತಮ್ಮ ವಿವೇಚನಾನುಸಾರವಾಗಿ ಯಾವೊಬ್ಬ ಇತರ ಸೂಕ್ತ ಅಧ್ಯಾಪಕರನ್ನು ಡೀನ್ ಆಗಿ ಕಾರ್ಯನಿರ್ವಹಿಸುವಂತೆ ಹೆಸರಿಸಬಹುದು:

ಅಷ್ಟೇ ಅಲ್ಲದೆ, ಒಂದು ಫ್ಯಾಕಲ್ಟಿಯಲ್ಲಿ, ಆ ಫ್ಯಾಕಲ್ಟಿಯ ಡೀನ್ ಆಗಿ ಕಾರ್ಯ ನಿರ್ವಹಿಸಲು ಯಾವ ವ್ಯಕ್ತಿಯೂ ಲಭ್ಯವಿಲ್ಲದಿದ್ದಲ್ಲಿ ಅಥವಾ ವಿಶ್ವವಿದ್ಯಾಲಯವು ಯಾವುದೇ ಫ್ಯಾಕಲ್ಟಿಗೆ ಅಂಥ ಒಂದು ಅಧ್ಯಯನ ವಿಭಾಗವನ್ನು ಹೊಂದಿರದಿದ್ದಲ್ಲಿ, ಆಗ ಅದರ ಯಾವುದೇ ಸಂಯೋಜಿತ ಕಾಲೇಜಿನಲ್ಲಿನ ಅಧ್ಯಯನ ವಿಭಾಗದಲ್ಲಿಯ ಅಂಥ ಅಧ್ಯಾಪಕರನ್ನು, ಜ್ಯೇಷ್ಠತೆಯ ಆಧಾರದ ಮೇಲೆ ಆ ಫ್ಯಾಕಲ್ಟಿಯ ಡೀನ್ ಆಗಿ ಕಾರ್ಯ ನಿರ್ವಹಿಸಲು ಕುಲಪತಿಯವರು ನಾಮನಿರ್ದೇಶಿಸಬಹುದು.

(2) ಪ್ರತಿಯೊಂದು ಫ್ಯಾಕಲ್ಟಿಯ ಡೀನ್ ರವರು ಆ ಫ್ಯಾಕಲ್ಟಿಯ ಕಾರ್ಯನಿರ್ವಾಹಕ ಅಧಿಕಾರಿಯಾಗಿರತಕ್ಕದ್ದು ಮತ್ತು ಫ್ಯಾಕಲ್ಟಿಯ ಸಭೆಗಳ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(3) ಡೀನ್‌ರವರು ಶಾಸನಗಳ ಅಥವಾ ಪರ್ಯಾದೇಶಗಳ ಮೂಲಕ ನಿಯಮಿಸಬಹುದಾದಂಥ ಇತರ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಅಂಥ ಇತರ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**23. ವಿದ್ಯಾರ್ಥಿ ಕಲ್ಯಾಣ ನಿರ್ದೇಶಕರು.–** ವಿದ್ಯಾರ್ಥಿ ಕಲ್ಯಾಣ ನಿರ್ದೇಶಕರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ಅವರನ್ನು ಪ್ರಶಾಸನ ಸಭೆಯ ಶಿಫಾರಸಿನ ಮೇರೆಗೆ ಕುಲಾಧಿಪತಿಯವರು ನೇಮಿಸತಕ್ಕದ್ದು. ಅವರು ಕುಲಾಧಿಪತಿಯವರು ತಮಗೆ ವಹಿಸಿಕೊಟ್ಟ ಅಥವಾ ವಿಧಿಸಿದ ಅಥವಾ ಶಾಸನಗಳ ಮೂಲಕ ನಿಯಮಿಸಲಾದಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಅಥವಾ ಅಂಥ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು. ಅವರ ಪದಾವಧಿ, ಉಪಲಬ್ಧಿಗಳು ಮತ್ತು ಇತರ ಸೇವಾ ಷರತ್ತುಗಳು ಶಾಸನಗಳ ಮೂಲಕ ನಿಯಮಿಸಲಾದಂತೆ ಇರತಕ್ಕದ್ದು.

**24. ಗ್ರಂಥಪಾಲಕರು.–** ಗ್ರಂಥಪಾಲಕರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ಅವರನ್ನು 68ನೇ ಪ್ರಕರಣದ (1)ನೇ ಉಪ ಪ್ರಕರಣದಡಿಯಲ್ಲಿ ರಚಿಸಲಾದ ನೇಮಕಾತಿ ಮಂಡಳಿಯ ಶಿಫಾರಸಿನ ಮೇಲೆ ಪ್ರಶಾಸನ ಸಭೆಯು ನೇಮಿಸತಕ್ಕದ್ದು. ಅವರು ಶಾಸನಗಳ ಮೂಲಕ ನಿಯಮಿಸಲಾದಂಥ ಅರ್ಹತೆಗಳನ್ನು ಹೊಂದಿರತಕ್ಕದ್ದು ಮತ್ತು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು. ಅವರ ಉಪಲಬ್ಧಿಗಳು ಮತ್ತು ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ಶಾಸನಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

**25. ಯೋಜನೆ, ನಿರ್ವಹಣೆ ಮತ್ತು ಮೌಲ್ಯಮಾಪನ ಮಂಡಳಿಯ ನಿರ್ದೇಶಕರು.–** ಯೋಜನೆ, ನಿರ್ವಹಣೆ ಮತ್ತು ಮೌಲ್ಯಮಾಪನ ಮಂಡಳಿಯ ನಿರ್ದೇಶಕರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ಅವರನ್ನು ಪ್ರಶಾಸನ ಸಭೆಯು ನೇಮಿಸತಕ್ಕದ್ದು. ಅವರು ಶಾಸನಗಳ ಮೂಲಕ ನಿಯಮಿಸಬಹುದಾದಂಥ ಅರ್ಹತೆಗಳನ್ನು ಹೊಂದಿರತಕ್ಕದ್ದು ಮತ್ತು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನೆರವೇರಿಸತಕ್ಕದ್ದು. ಅವರ ಉಪಲಬ್ಧಿಗಳು ಮತ್ತು ನಿಬಂಧನೆಗಳು ಮತ್ತು ಷರತ್ತುಗಳು ಶಾಸನಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

**26. ನಿರ್ದೇಶಕರು, ಕಾಲೇಜು ಅಭಿವೃದ್ಧಿ ಪರಿಷತ್ತು.–** ನಿರ್ದೇಶಕರು, ಕಾಲೇಜು ಅಭಿವೃದ್ಧಿ ಪರಿಷತ್ತು ಇವರು ವಿಶ್ವವಿದ್ಯಾಲಯದ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಮತ್ತು ಅವರನ್ನು ಪ್ರಶಾಸನ ಸಭೆಯು ನೇಮಿಸತಕ್ಕದ್ದು. ಅವರು ಶಾಸನಗಳ ಮೂಲಕ ನಿಯಮಿಸಬಹುದಾದಂಥ ಅರ್ಹತೆಗಳನ್ನು ಹೊಂದಿರತಕ್ಕದ್ದು ಮತ್ತು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು. ಅವರ ಉಪಲಬ್ಧಿಗಳು ಮತ್ತು ಸೇವಾ ನಿಬಂಧನೆಗಳು ಹಾಗೂ ಷರತ್ತುಗಳು ಶಾಸನಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

**27. ದೈಹಿಕ ಶಿಕ್ಷಣದ ನಿರ್ದೇಶಕರು.–** ದೈಹಿಕ ಶಿಕ್ಷಣದ ನಿರ್ದೇಶಕರು ವಿಶ್ವವಿದ್ಯಾಲಯಕ ಪೂರ್ಣಕಾಲಿಕ ಅಧಿಕಾರಿಯಾಗಿರತಕ್ಕದ್ದು ಮತ್ತು 68ನೇ ಪ್ರಕರಣದಡಿಯಲ್ಲಿ ರಚಿಸಲಾದ ನೇಮಕಾತಿ ಮಂಡಳಿಯ ಶಿಫಾರಸ್ಸಿನ ಮೇಲೆ ಪ್ರಶಾಸನ ಸಭೆಯು ಅವರನ್ನು ನೇಮಿಸತಕ್ಕದ್ದು. ಅವರು ಶಾಸನಗಳ ಮೂಲಕ ನಿಯಮಿಸಬಹುದಾದಂಥ ಅರ್ಹತೆಗಳನ್ನು ಹೊಂದಿರತಕ್ಕದ್ದು ಮತ್ತು ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಹಾಗೂ ಅಂಥ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು. ಅವರ ಉಪಲಬ್ಧಿಗಳು ಮತ್ತು ಸೇವಾ ನಿಬಂಧನೆಗಳು ಹಾಗೂ ಷರತ್ತುಗಳು ಶಾಸನಗಳ ಮೂಲಕ ನಿಯಮಿಸಬಹುದಾದಂತೆ ಇರತಕ್ಕದ್ದು.

## ಅಧ್ಯಾಯ - IV

### ವಿಶ್ವವಿದ್ಯಾಲಯ ಪ್ರಾಧಿಕಾರಗಳು

**28. ವಿಶ್ವವಿದ್ಯಾಲಯದ ಪ್ರಾಧಿಕಾರಗಳು.-** ಮುಂದಿನವುಗಳು ವಿಶ್ವವಿದ್ಯಾಲಯದ ಪ್ರಾಧಿಕಾರಗಳಾಗಿರತಕ್ಕದ್ದು, ಎಂದರೆ:–

(ಎ) ಪ್ರಶಾಸನಸಭೆ,

(ಬಿ) ಪ್ರಶಿಕ್ಷಣ ಪರಿಷತ್ತು,

(ಸಿ) ಅಧ್ಯಯನ ಮಂಡಳಿಗಳು,

(ಡಿ) ಫ್ಯಾಕಲ್ಟಿಗಳು.

(ಇ) ಹಣಕಾಸು ಸಮಿತಿ,

(ಎಫ್) ಯೋಜನೆ, ಮೇಲ್ವಿಚಾರಣೆ ಹಾಗೂ ಮೌಲ್ಯಮಾಪನ ಮಂಡಳಿ ಮತ್ತು

(ಜಿ) ಶಾಸನಗಳ ಮೂಲಕ ವಿಶ್ವವಿದ್ಯಾಲಯದ ಪ್ರಾಧಿಕಾರಗಳೆಂದು ಘೋಷಿಸಬಹುದಾದಂಥ ಇತರ ಪ್ರಾಧಿಕಾರಗಳು.

**ಪ್ರಶಾಸನ ಸಭೆ**

**29. ಪ್ರಶಾಸನ ಸಭೆ.–** (1) ಕುಲಾಧಿಪತಿಯವರು, 14ನೇ ಪ್ರಕರಣದಡಿ ಮೊದಲನೇ ಕುಲಪತಿಯವರು ನೇಮಕಗೊಂಡ ಮೇಲೆ ಆದಷ್ಟು ಬೇಗನೆ ಪ್ರಶಾಸನ ಸಭೆಯನ್ನು ರಚಿಸತಕ್ಕದ್ದು.

(2) ಕುಲಪತಿಯವರು ಪ್ರಶಾಸನ ಸಭೆಯ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು.

(3) ಪ್ರಶಾಸನ ಸಭೆಯು ಈ ಮುಂದಿನ ಇತರ ಸದಸ್ಯರನ್ನು ಒಳಗೊಂಡಿರತಕ್ಕದ್ದು; ಎಂದರೆ:–

(ಎ) ಸರ್ಕಾರದ ಕಾರ್ಯದರ್ಶಿಗಳು, ಕಾನೂನು, ನ್ಯಾಯ ಮತ್ತು ಮಾನವಹಕ್ಕುಗಳ ಇಲಾಖೆ ಅಥವಾ ಸರ್ಕಾರದ ಅಪರ ಕಾರ್ಯದರ್ಶಿಗಿಂತ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತ — ಪದನಿಮಿತ್ತ ಸದಸ್ಯರು

(ಬಿ) ಸರ್ಕಾರದ ಕಾರ್ಯದರ್ಶಿಗಳು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಅಥವಾ ಸರ್ಕಾರದ ಜಂಟಿ ಕಾರ್ಯದರ್ಶಿಗಿಂತ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತ — ಪದನಿಮಿತ್ತ ಸದಸ್ಯರು

(ಸಿ) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಉನ್ನತ ಶಿಕ್ಷಣ — ಪದನಿಮಿತ್ತ ಸದಸ್ಯರು

(ಡಿ) ಕಾಲೇಜು ಶಿಕ್ಷಣ ಆಯುಕ್ತರು ಅಥವಾ ಹೆಚ್ಚುವರಿ ಆಯುಕ್ತ ಅಥವಾ ರಾಜ್ಯಸರ್ಕಾರದಿಂದ ನಾಮ ನಿರ್ದೇಶಿತರಾದ ಕಾಲೇಜು ಶಿಕ್ಷಣ ಜಂಟಿ ನಿರ್ದೇಶಕರ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತ;

(ಇ) ಜ್ಯೇಷ್ಠತೆಯ ಆಧಾರದ ಮೇಲೆ ಸುತ್ತು ಸರದಿಯ ಮೇಲೆ ಒಂದು ವರ್ಷದ ಅವಧಿಗಾಗಿ ಕುಲಪತಿಯವರು ನಾಮನಿರ್ದೇಶಿಸುವ ಒಬ್ಬ ಡೀನ್;

(ಎಫ್) ಜ್ಯೇಷ್ಠತೆಗನುಸಾರವಾಗಿ ಸುತ್ತು ಸರದಿಯ ಮೇಲೆ ಕುಲಪತಿಯವರು ನಾಮನಿರ್ದೇಶಿಸುವ, ಅಧ್ಯಯನ ಮತ್ತು ಸಂಶೋಧನಾ ವಿಭಾಗದ ಉತ್ಕೃಷ್ಟತಾ ವಿದ್ಯಾಲಯದ (School of excellence) ಅಥವಾ ಪ್ರೌಢ ವ್ಯಾಸಂಗ (Advanced) ಅಧ್ಯಯನ ಕೇಂದ್ರಗಳ ಮುಖ್ಯಸ್ಥರ ಪೈಕಿ ಇಬ್ಬರು ಪ್ರಾಧ್ಯಾಪಕರು;

(ಜಿ) ಸರ್ಕಾರವು ನಾಮನಿರ್ದೇಶಿಸಿದ ಐದು ಸದಸ್ಯರು, ಅವರಲ್ಲಿ, ಒಬ್ಬರು ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಬುಡಕಟ್ಟಿಗೆ ಸೇರಿದ ವ್ಯಕ್ತಿಯಾಗಿರತಕ್ಕದ್ದು, ಒಬ್ಬರು ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ವ್ಯಕ್ತಿಯಾಗಿರತಕ್ಕದ್ದು, ಮತ್ತು ಇತರೆ ಮೂರು ಜನರು ಕಾನೂನು ವೃತ್ತಿಯಲ್ಲಿರುವ ಅಥವಾ ಕಾನೂನು ಬೋಧನಾ ವಿಭಾಗಕ್ಕೆ ಸೇರಿದ ಸದಸ್ಯರಾಗಿದ್ದು ಅವರಲ್ಲಿ ಒಬ್ಬರು ಮಹಿಳೆಯಾಗಿರತಕ್ಕದ್ದು;

(ಎಚ್) ಕುಲಪತಿಯವರು ನಾಮನಿರ್ದೇಶಿಸುವ ಸಂಯೋಜಿತ ಅಥವಾ ಘಟಕ ಕಾಲೇಜುಗಳ ಇಬ್ಬರು ಪ್ರಾಂಶುಪಾಲರ;

(ಐ) ಕುಲಪತಿಯವರು ನಾಮನಿರ್ದೇಶಿಸುವ, ಖ್ಯಾತ ಶಿಕ್ಷಣ ತಜ್ಞರುಗಳು ಅಥವಾ ಕಾನೂನು ಶಿಕ್ಷಣ ಕ್ಷೇತ್ರದಲ್ಲಿನ ವ್ಯಕ್ತಿಗಳ ಪೈಕಿ, ಇಬ್ಬರು ಸದಸ್ಯರು.

(4) ಒಬ್ಬ ವ್ಯಕ್ತಿಯ ಪ್ರಶಾಸನ ಸಭೆಯ ಸದಸ್ಯತ್ವ ಕೊನೆಗೊಂಡಲ್ಲಿ, ಅವರು, ಪ್ರಶಾಸನ ಸಭೆಯ ತನ್ನ ಸದಸ್ಯತ್ವದ ಕಾರಣದಿಂದಾಗಿ ಸದಸ್ಯರಾಗಿರಬಹುದಾದ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಸದಸ್ಯರಾಗಿರುವುದೂ ಕೊನೆಗೊಳ್ಳತಕ್ಕದ್ದು.

**30. ಪ್ರಶಾಸನ ಸಭೆಯ ಅಧಿಕಾರಗಳು.–** ಪ್ರಶಾಸನ ಸಭೆಯು ಈ ಮುಂದಿನ ಅಧಿಕಾರಗಳನ್ನು ಹೊಂದಿರತಕ್ಕದ್ದು, ಎಂದರೆ:–

(i) ಶಾಸನಗಳು ಮತ್ತು ಪರ್ಯಾದೇಶಗಳನ್ನು ರಚಿಸುವುದು ಮತ್ತು ಅವುಗಳಿಗೆ ತಿದ್ದುಪಡಿ ಮಾಡುವುದು ಅಥವಾ ಅವುಗಳನ್ನು ನಿರಸನಗೊಳಿಸುವುದು;

(ii) ವಿಶ್ವವಿದ್ಯಾಲಯದ ಸ್ವತ್ತುಗಳು ಮತ್ತು ನಿಧಿಗಳನ್ನು ಹೊಂದಿರುವುದು, ನಿಯಂತ್ರಿಸುವುದು ಮತ್ತು ಆಡಳಿತ ನಡೆಸುವುದು;

(iii) ತಾನು ಸೂಕ್ತವೆಂದು ಭಾವಿಸಬಹುದಾದಂಥ ಕಾನೂನಿನ ಜ್ಞಾನದ ಶಾಖೆಗಳಲ್ಲಿ ಅಥವಾ ಕ್ಷೇತ್ರಗಳಲ್ಲಿ ಬೋಧನೆ ಮತ್ತು ತರಬೇತಿಗಳಿಗಾಗಿ ಉಪಬಂಧ ಕಲ್ಪಿಸುವುದು;

(iv) ತಾನು ಸೂಕ್ತವೆಂದು ಭಾವಿಸಬಹುದಾದಂಥ, ಕಾನೂನಿನ ವಿವಿಧ ಕ್ಷೇತ್ರದ ಕಲಿಕೆ ವಿಭಾಗಗಳಲ್ಲಿ ಅಧ್ಯಯನ ವಿಭಾಗಗಳನ್ನು ರಾಜ್ಯ ಸರ್ಕಾರದ ಪೂರ್ವಾನುಮತಿಯೊಡನೆ ವಿಶ್ವವಿದ್ಯಾಲಯದಲ್ಲಿ ಸ್ಥಾಪಿಸುವುದು;

(v) ಕಾನೂನಿನ ವಿವಿಧ ಕ್ಷೇತ್ರಗಳಲ್ಲಿ ಸಂಶೋಧನೆ, ಜ್ಞಾನಾಭಿವೃದ್ಧಿ ಮತ್ತು ಜ್ಞಾನ ಪ್ರಸಾರಕ್ಕಾಗಿ ಅವಕಾಶ ಕಲ್ಪಿಸುವುದು;

(vi) ವಿಶ್ವವಿದ್ಯಾಲಯಕ್ಕೆ ಅಗತ್ಯವಾದ ಉಪನ್ಯಾಸಕರು, ಪ್ರವಾಚಕರು, ಪ್ರಾಧ್ಯಾಪಕರುಗಳು ಮತ್ತು ಇತರೆ ಬೋಧಕರ ಮತ್ತು ಬೋಧಕೇತರ ಹುದ್ದೆಗಳನ್ನು ರಾಜ್ಯ ಸರ್ಕಾರದ ಪೂರ್ವಾನುಮತಿಯೊಡನೆ ಸೃಜಿಸುವುದು;

(vii) ವಿಶ್ವವಿದ್ಯಾಲಯಕ್ಕೆ ಕಾಲೇಜುಗಳು ಸಂಯೋಜನೆಗೊಳ್ಳಲು ಷರತ್ತುಗಳನ್ನು ಈ ಉದ್ದೇಶಕ್ಕಾಗಿಯೇ ನೇಮಕ ಮಾಡಲಾದ ತಜ್ಞ ಸಮಿತಿಗಳೊಂದಿಗೆ ಸಮಾಲೋಚಿಸಿ ನಿಯಮಿಸುವುದು;

(viii) ಪದವಿಗಳು, ಡಿಪ್ಲೋಮಾಗಳು ಮತ್ತಿತರ ವಿದ್ಯಾ ಪ್ರಶಸ್ತಿಗಳನ್ನು ಪ್ರಾರಂಭಿಸುವುದು;

(ix) ಈ ಮುಂದಿನ ವ್ಯಕ್ತಿಗಳಿಗೆ ಪದವಿಗಳು, ಡಿಪ್ಲೋಮಾಗಳು ಮತ್ತು ಇತರೆ ಶೈಕ್ಷಣಿಕ ಪ್ರಶಸ್ತಿಗಳನ್ನು ನೀಡುವುದು, ಅವರುಗಳೆಂದರೆ:–

(ಎ) ವಿವಿಧ ಅಧೀನ ನ್ಯಾಯಾಲಯಗಳು ಮತ್ತು ನ್ಯಾಯ ಮಂಡಳಿಗಳಲ್ಲಿ ಆರು ತಿಂಗಳುಗಳ ಅವಧಿಯ ಪ್ರಾಯೋಗಿಕ ತರಬೇತಿಯನ್ನು ಒಳಗೊಂಡ ಒಂದು ನಿಯುಕ್ತಿಶಿಕ್ಷಣ (ಇಂಟರ್ನ್‌ಶಿಪ್) ವ್ಯಾಸಂಗ ಕ್ರಮವನ್ನು ಪೂರ್ಣಗೊಳಿಸಿದ ವ್ಯಕ್ತಿ;

(ಬಿ) ಶಾಸನಗಳ ಮೂಲಕ ನಿಯಮಿಸಬಹುದಾದ ರೀತಿಯಲ್ಲಿ ಆ ಬಗ್ಗೆ ವಿನಾಯಿತಿ ನೀಡಿದ್ದ ಹೊರತು ಕಾಲೇಜಿನಲ್ಲಿ ಅಥವಾ ಅನುಮೋದಿತ ಸಂಸ್ಥೆಯಲ್ಲಿ ಅನುಮೋದಿತ ವ್ಯಾಸಂಗ ಕ್ರಮವನ್ನು ಓದಿರತಕ್ಕ ಅಥವಾ ತರಬೇತಿ ಪಡೆದಿರತಕ್ಕ ಮತ್ತು ವಿಶ್ವವಿದ್ಯಾಲಯವು ನಿಯಮಿಸಿರುವ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರುವ ವ್ಯಕ್ತಿ; ಅಥವಾ

(ಸಿ) ಶಾಸನಗಳ ಮೂಲಕ ನಿಯಮಿಸಲಾದ ಷರತ್ತುಗಳ ಅಡಿಯಲ್ಲಿ ಸಂಶೋಧನೆಯನ್ನು ಪೂರೈಸಿರುವ ವ್ಯಕ್ತಿ.

(x) ಪ್ರಶಾಸನ ಸಭೆಯ ಸದಸ್ಯರುಗಳ ಪೈಕಿ ಮೂರನೇ ಎರಡರಷ್ಟು ಸದಸ್ಯರಿಗಿಂತ ಕಡಿಮೆ ಇಲ್ಲದ ಸಂಖ್ಯೆಯ ಸದಸ್ಯರ ಶಿಫಾರಸ್ಸಿನ ಮೇಲೆ ಗೌರವ ಪದವಿಗಳನ್ನು ಅಥವಾ ಇತರೆ ಗೌರವ ಪ್ರಶಸ್ತಿಗಳನ್ನು ನೀಡುವುದು;

(xi) ವಾರ್ಷಿಕ ವರದಿ, ವಾರ್ಷಿಕ ಲೆಕ್ಕಪತ್ರಗಳು ಮತ್ತು ಹಣಕಾಸು ಅಂದಾಜುಗಳನ್ನು ಪರಿಗಣಿಸುವುದು ಮತ್ತು ಅವುಗಳ ಮೇಲೆ ತಾನು ಸೂಕ್ತವೆಂದು ಭಾವಿಸಬಹುದಾದಂಥ ಕ್ರಮಕೈಗೊಳ್ಳುವುದು;

(xii) ವಿಶ್ವವಿದ್ಯಾಲಯದ ವಿಭಾಗಗಳ ಮತ್ತು ವಿಶ್ವವಿದ್ಯಾಲಯ ಕಾಲೇಜುಗಳ ಮತ್ತು ಸಂಯೋಜಿತ ಕಾಲೇಜುಗಳ ಅಧ್ಯಾಪಕರ ವಿದ್ಯಾರ್ಹತೆಗಳನ್ನು ಶಾಸನಗಳಲ್ಲಿ ನಿಗದಿಪಡಿಸುವುದು;

(xiii) ಆಯ್ಕೆಯ ಉದ್ದೇಶಕ್ಕಾಗಿಯೇ ನೇಮಕಗೊಂಡ ತಜ್ಞರ ಆಯ್ಕೆ ಸಮಿತಿಯ ಶಿಫಾರಸ್ಸಿನ ಮೇಲೆ ವಿಶ್ವವಿದ್ಯಾಲಯ ಉಪನ್ಯಾಸಕರು, ಪ್ರವಾಚಕರು, ಪ್ರಾಧ್ಯಾಪಕರು ಮತ್ತು ಅಧ್ಯಾಪಕರುಗಳನ್ನು ನೇಮಕ ಮಾಡುವುದು, ಅವರ ಉಪಲಬ್ಧಿಗಳನ್ನು ನಿಗದಿಪಡಿಸುವುದು, ಅವರ ಕರ್ತವ್ಯಗಳು ಮತ್ತು ಸೇವಾ ಷರತ್ತುಗಳನ್ನು ಪರಿಭಾಷಿಸುವುದು ಮತ್ತು ತಾತ್ಕಾಲಿಕ ಖಾಲಿ ಸ್ಥಾನಗಳನ್ನು ಭರ್ತಿ ಮಾಡಿಕೊಳ್ಳುವುದಕ್ಕಾಗಿ ಉಪಬಂಧ ಕಲ್ಪಿಸುವುದು;

(xiv) ಆಡಳಿತಾತ್ಮಕ ಮತ್ತು ಇತರೆ ಹುದ್ದೆಗಳಿಗೆ ವ್ಯಕ್ತಿಗಳನ್ನು ನೇಮಕ ಮಾಡುವ ಕ್ರಮವನ್ನು ನಿರ್ದಿಷ್ಟಪಡಿಸಲು ಶಾಸನಗಳನ್ನು ಮಾಡುವುದು, ತಾತ್ಕಾಲಿಕ ಖಾಲಿ ಸ್ಥಾನಗಳನ್ನು ಭರ್ತಿ ಮಾಡಲು ಮತ್ತು ಅವರ ಕರ್ತವ್ಯಗಳು ಹಾಗೂ ಅವರ ಸೇವಾ ನಿಬಂಧನೆಗಳು ಮತ್ತು ಷರತ್ತುಗಳನ್ನು ಪರಿಭಾಷಿಸಲು ಉಪಬಂಧ ಕಲ್ಪಿಸುವುದು;

(xv) ಶಾಸನಗಳ ಮೂಲಕ ನಿಯಮಿಸಬಹುದಾದ ರೀತಿಯಲ್ಲಿ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ಪ್ರವಾಚಕರು, ಉಪನ್ಯಾಸಕರು, ಅಧ್ಯಾಪಕರು ಮತ್ತು ವಿಶ್ವವಿದ್ಯಾಲಯದ ಇತರ ನೌಕರರ ವಿರುದ್ಧ ಶಿಸ್ತಿನ ವ್ಯವಹರಣೆಗಳನ್ನು ಕೈಗೊಳ್ಳುವುದು ಮತ್ತು ಶಾಸನಗಳಲ್ಲಿ ನಿರ್ದಿಷ್ಟಪಡಿಸಿರಬಹುದಾದಂಥ ದಂಡನೆಗಳನ್ನು ವಿಧಿಸುವುದು ಮತ್ತು ಅವರುಗಳನ್ನು ವಿಚಾರಣೆಯು ನಡೆಯುತ್ತಿರುವಾಗ ಅಮಾನತ್ತಿನಲ್ಲಿಡುವುದು;

(xvi) ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡ ಅಥವಾ ಸಂಯೋಜನೆಗೊಳ್ಳಬೇಕಾಗಿರುವ ಎಲ್ಲಾ ಕಾಲೇಜುಗಳು ಮತ್ತು ಇತರೆ ಸಂಸ್ಥೆಗಳ ತಪಾಸಣೆ ನಡೆಸುವಂತೆ ಮಾಡುವುದು ಮತ್ತು ಅವಶ್ಯಕವೆಂದು ಭಾವಿಸಬಹುದಾದಂಥ ಕ್ರಮ ಕೈಗೊಳ್ಳುವುದು;

(xvii) ಒಂದು ಕಾಲೇಜು ಅಥವಾ ಸಂಸ್ಥೆಯನ್ನು ಯಾವ ರೀತಿಯಲ್ಲಿ ಮತ್ತು ಯಾವ ಷರತ್ತುಗಳ ಮೇಲೆ ಸ್ವಾಯತ್ತ ಕಾಲೇಜು ಅಥವಾ ಸಂಸ್ಥೆ ಎಂಬುದಾಗಿ ಹೆಸರಿಸಬಹುದು ಮತ್ತು ಹಾಗೆ ಹೆಸರಿಸಿದ್ದನ್ನು ರದ್ದುಪಡಿಸಬಹುದು ಎಂಬುದನ್ನು ನಿಯಮಿಸುವುದು;

(xviii) ಸರ್ಕಾರದ ಒಪ್ಪಿಗೆ ಪಡೆದು ಯಾವುದೇ ಕಾಲೇಜನ್ನು ಸ್ವಾಯತ್ತ ಕಾಲೇಜು ಎಂಬುದಾಗಿ ಹೆಸರಿಸುವುದು ಮತ್ತು ಹಾಗೆ ಹೆಸರಿಸಿರುವುದನ್ನು ರದ್ದುಪಡಿಸುವುದು;

(xix) ಪರಿಶೀಲನಾ ಆಯೋಗದ ವರದಿಯ ಮೇಲೆ ವಿಶ್ವವಿದ್ಯಾಲಯ ಪ್ರದೇಶದ ಹೊರಗೆ ಇರುವ ಯಾವುದೇ ಕಾಲೇಜು ಅಥವಾ ಸಂಸ್ಥೆಗೆ ಮಾನ್ಯತೆ ನೀಡುವುದು;

(xx) ಕೇಂದ್ರ ಅಥವಾ ಯಾವುದೇ ರಾಜ್ಯ ಸರ್ಕಾರದಿಂದ ಅಥವಾ ಕೇಂದ್ರ ಅಥವಾ ಯಾವುದೇ ರಾಜ್ಯ ಸರ್ಕಾರದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ನಿಗಮದಿಂದ ಅಥವಾ ಸಾರ್ವಜನಿಕರಿಂದ ವಿಶ್ವವಿದ್ಯಾಲಯದ ಪರವಾಗಿ ಸಾಲವನ್ನು ಪಡೆಯುವುದು;

(xxi) ವಿಶ್ವವಿದ್ಯಾಲಯದ ಸ್ವತ್ತಿನ ಭದ್ರತೆಯ ಆಧಾರದ ಮೇಲೆ, ಸರ್ಕಾರದ ಅನುಮೋದನೆಯೊಂದಿಗೆ ವಿಶ್ವವಿದ್ಯಾಲಯದ ಉದ್ದೇಶಗಳಿಗಾಗಿ ಹಣವನ್ನು ಸಾಲಪಡೆಯುವುದು;

(xxii) ಅಧ್ಯಯನ ಮಂಡಲಿಯ ಶಿಫಾರಸ್ಸಿನ ಮೇಲೆ ಪರೀಕ್ಷಕರನ್ನು ನೇಮಕ ಮಾಡುವುದು ಮತ್ತು ಅವರ ಸಂಭಾವನೆಯನ್ನು ನಿಗದಿಪಡಿಸುವುದು;

(xxiii) ಶಾಸನಗಳ ಮೂಲಕ ನಿಯಮಿಸಬಹುದಾದಂಥ ಫೀಜನ್ನು ವಿಧಿಸುವುದು ಮತ್ತು ಸಂಗ್ರಹಿಸುವುದು;

(xxiv) ವಿಶ್ವವಿದ್ಯಾಲಯ ಪರೀಕ್ಷೆಗಳನ್ನು ನಡೆಸುವುದು ಮತ್ತು ಅವುಗಳ ಫಲಿತಾಂಶಗಳನ್ನು ಅನುಮೋದಿಸುವುದು ಮತ್ತು ಪ್ರಕಟಿಸುವುದು;

(xxv) ಅಧ್ಯಯನ ಮಂಡಲಿಗೆ ಸದಸ್ಯರನ್ನು ನೇಮಕ ಮಾಡುವುದು;

(xxvi) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಸಂಬಂಧಪಟ್ಟಂತೆ ಅಥವಾ ವಿಶ್ವವಿದ್ಯಾಲಯ ಪರೀಕ್ಷೆಗಳಿಗೆ ಸಮಾನವಾದ ಪರೀಕ್ಷೆಗಳೆಂದು ಮಾನ್ಯತೆ ನೀಡಲು ಪರೀಕ್ಷೆಗಳನ್ನು ಗೊತ್ತುಪಡಿಸಲು ಪರ್ಯಾದೇಶಗಳನ್ನು ರಚಿಸುವುದು;

(xxvii) ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(xxviii) ವಿಶ್ವವಿದ್ಯಾಲಯವು ನಿರ್ವಹಿಸದಿರುವ ವಿದ್ಯಾರ್ಥಿನಿಲಯಗಳಿಗೆ ಮಾನ್ಯತೆ ನೀಡುವುದು; ಮತ್ತು ಯಾವ ಷರತ್ತುಗಳಿಗೊಳಪಟ್ಟು ಮಾನ್ಯತೆ ನೀಡಲಾಗಿದೆಯೋ ಅದಕ್ಕನುಸಾರವಾಗಿ ನಡೆದುಕೊಳ್ಳದ ವಿದ್ಯಾರ್ಥಿನಿಲಯದ ಮಾನ್ಯತೆಯನ್ನು ಅಮಾನತುಗೊಳಿಸುವುದು ಅಥವಾ ಹಿಂದಕ್ಕೆ ಪಡೆಯುವುದು;

(xxix) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ವಸತಿಗೃಹದ ಮೇಲ್ವಿಚಾರಣೆ ಮಾಡುವುದು ಮತ್ತು ಅವರ ಆರೋಗ್ಯ ಮತ್ತು ಯೋಗಕ್ಷೇಮವನ್ನು ವೃದ್ಧಿಗೊಳಿಸಲು ವ್ಯವಸ್ಥೆ ಮಾಡುವುದು;

(xxx) ಶಾಸನಗಳಿಗೆ ಅನುಸಾರವಾಗಿ ಫೆಲೋಶಿಪ್‌ಗಳು, ಸಂಚಾರಿ ಫೆಲೋಶಿಪ್‌ಗಳು, ವಿದ್ಯಾರ್ಥಿ ವೇತನಗಳು, ಪದಕಗಳು ಮತ್ತು ಪಾರಿತೋಷಕಗಳನ್ನು ನೀಡುವುದು;

(xxxi) ವಿಶ್ವವಿದ್ಯಾಲಯವು ಸ್ಥಾಪಿಸಿದ ಯಾವುದೇ ಪ್ರಕಟಣಾ ವಿಭಾಗ, ಉದ್ಯೋಗ ವಿಭಾಗ ಮತ್ತು ಕ್ರೀಡೆಗಳು ಮತ್ತು ಅಥ್ಲೆಟಿಕ್ ಕ್ಲಬ್‌ಗಳ ಆಡಳಿತ ನಿರ್ವಹಣೆಯನ್ನು ಮಾಡುವುದು;

(xxxii) ವಿಶ್ವವಿದ್ಯಾಲಯದ ಶಿಕ್ಷಣ ಮತ್ತು ಬೋಧನೆಯನ್ನು ಪುನರವಲೋಕಿಸುವುದು;

(xxxiii) ವಿಶ್ವವಿದ್ಯಾಲಯದೊಳಗೆ ಸಂಶೋಧನೆ ನಡೆಸುವುದಕ್ಕೆ ಪ್ರೋತ್ಸಾಹ ನೀಡುವುದು ಮತ್ತು ಅಂಥ ಸಂಶೋಧನೆಯ ಬಗ್ಗೆ ಕಾಲಕಾಲಕ್ಕೆ ವರದಿಗಳನ್ನು ನೀಡಬೇಕೆಂದು ಅಗತ್ಯಪಡಿಸುವುದು;

(xxxiv) ನಿರ್ದಿಷ್ಟ ಉದ್ದೇಶಗಳಿಗಾಗಿ ವಿಶ್ವವಿದ್ಯಾಲಯದ ಉಸ್ತುವಾರಿಯಲ್ಲಿರುವ ಎಲ್ಲಾ ಸ್ವತ್ತುಗಳು ಮತ್ತು ನಿಧಿಗಳ ಆಡಳಿತ ವ್ಯವಹರಣೆ ನಡೆಸುವುದು;

(xxxv) ವಿಶ್ವವಿದ್ಯಾಲಯಕ್ಕೆ ನೀಡಲಾದ ಯಾವುದೇ ಚರ ಮತ್ತು ಸ್ಥಿರ ಸ್ವತ್ತುಗಳ ದತ್ತಿ, ಮರಣ ಶಾಸನ ದಾನ, ದೇಣಿಗೆಗಳು, ದಾನಗಳು ಮತ್ತು ವರ್ಗಾವಣೆಗಳನ್ನು ವಿಶ್ವವಿದ್ಯಾಲಯದ ಪರವಾಗಿ ಸ್ವೀಕರಿಸುವುದು; ಮತ್ತು

(xxxvi) ಕುಲಪತಿಗೆ ಅಥವಾ ಶಾಸನಗಳಿಗೆ ಅನುಸಾರವಾಗಿ ನೇಮಿಸಲಾದ ತನ್ನ ಸದಸ್ಯರ ಪೈಕಿಯಿಂದ ರಚಿಸಲಾದ ಒಂದು ಸಮಿತಿಗೆ ತನ್ನ ಯಾವುವೇ ಅಧಿಕಾರಗಳನ್ನು ಪ್ರತ್ಯಾಯೋಜನೆ ಮಾಡುವುದು.

**31. ಪ್ರಶಾಸನ ಸಭೆಯ ಸಭೆಗಳು.–** (1) ಪ್ರಶಾಸನ ಸಭೆಯು ಶಾಸನಗಳ ಮೂಲಕ ನಿಯಮಿಸಬಹುದಾದಂಥ ಸಮಯ ಹಾಗೂ ಸ್ಥಳದಲ್ಲಿ ಕಡೇಪಕ್ಷ ಪ್ರತಿ ಎರಡು ತಿಂಗಳುಗಳಿಗೊಮ್ಮೆ ಸಭೆ ಸೇರತಕ್ಕದ್ದು ಮತ್ತು (2) ಮತ್ತು (3)ನೇ ಉಪ ಪ್ರಕರಣಗಳ ಉಪಬಂಧಗಳಿಗೆ ಒಳಪಟ್ಟು, ಸಭೆಯಲ್ಲಿ ಕೋರಂನ್ನು ಒಳಗೊಂಡಂತೆ ಅದರ ಸಭೆಗಳಲ್ಲಿನ ಕಾರ್ಯಕಲಾಪಗಳ ವ್ಯವಹಾರಗಳ ಸಂಬಂಧದಲ್ಲಿ ಅಂಥ ಕಾರ್ಯವಿಧಾನದ ನಿಯಮಗಳನ್ನು ಪಾಲಿಸತಕ್ಕದ್ದು.

(2) ಕುಲಪತಿ ಅಥವಾ ಅವರ ಗೈರುಹಾಜರಿಯಲ್ಲಿ, ಸದಸ್ಯರುಗಳ ಪೈಕಿಯಿಂದ ಆಯ್ಕೆ ಮಾಡಲಾದ ಹಾಜರಿರುವ ಯಾವೊಬ್ಬ ಸದಸ್ಯನು ಪ್ರಶಾಸನ ಸಭೆಯ ಅಧ್ಯಕ್ಷತೆ ವಹಿಸತಕ್ಕದ್ದು.

(3) ಪ್ರಶಾಸನ ಸಭೆಯ ಯಾವುದೇ ಸಭೆಯಲ್ಲಿನ ಎಲ್ಲಾ ಪ್ರಶ್ನೆಗಳನ್ನು ಹಾಜರಿರುವ ಮತ್ತು ಮತದಾನ ಮಾಡಿದ ಸದಸ್ಯರುಗಳ ಮತಗಳ ಬಹುಮತದ ಮೂಲಕ ತೀರ್ಮಾನಿಸತಕ್ಕದ್ದು ಮತ್ತು ಮತಗಳು ಸಮವಾಗಿ ಬಂದ ಸಂದರ್ಭದಲ್ಲಿ, ಸಂದರ್ಭಾನುಸಾರ ಕುಲಪತಿ ಅಥವಾ ಅಧ್ಯಕ್ಷತೆ ವಹಿಸಿರುವ ಸದಸ್ಯನು ಎರಡನೇ ಅಥವಾ ನಿರ್ಣಾಯಕ ಮತ ಚಲಾಯಿಸತಕ್ಕದ್ದು.

(4) (ಎ) ಪ್ರಶಾಸನ ಸಭೆ ಪರಿಗಣಿಸುತ್ತಿರುವ ಯಾವುದೇ ವಿಷಯದಲ್ಲಿ ವಿಶೇಷ ಜ್ಞಾನ ಹೊಂದಿರುವ ಅಥವಾ ವಾಸ್ತವ ಅನುಭವ ಹೊಂದಿರುವ ಯಾವೊಬ್ಬ ವ್ಯಕ್ತಿಯನ್ನು ಸಮಾಲೋಚನೆಯ ಉದ್ದೇಶಕ್ಕಾಗಿ ಯಾವುದೇ ಸಭೆಗೆ ಹಾಜರಾಗುವಂತೆ ಆಹ್ವಾನಿಸಬಹುದು ಮತ್ತು ಅಂಥ ವ್ಯಕ್ತಿಯು ಆ ವಿಷಯದ ಬಗ್ಗೆ ಮಾತನಾಡಬಹುದು ಮತ್ತು ಅನ್ಯಥಾ ಅಂಥ ಸಭೆಯ ವ್ಯವಹರಣೆಗಳಲ್ಲಿ ಭಾಗವಹಿಸಬಹುದು, ಆದರೆ ಮತ ಚಲಾಯಿಸಲು ಹಕ್ಕು ಹೊಂದಿರತಕ್ಕದ್ದಲ್ಲ.

(ಬಿ) ಹಾಗೆ ಆಹ್ವಾನಿಸಲಾದ ವ್ಯಕ್ತಿಗಳು, ಪ್ರಶಾಸನ ಸಭೆಯ ಸದಸ್ಯರಿಗೆ ಅನ್ವಯವಾಗುವಂಥ ದಿನಭತ್ಯೆ ಮತ್ತು ಪ್ರವಾಸ ಭತ್ಯೆಗಳನ್ನು ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು.

(5) ಕುಲಾಧಿಪತಿಯು, ತಾವು ನಿರ್ದಿಷ್ಟಪಡಿಸಬಹುದಾದಂಥ ಪರಿಶೀಲನಾಂಶಗಳನ್ನು ಚರ್ಚಿಸಲು ಸಭೆಯನ್ನು ಕರೆಯಲು ಆದೇಶದ ಮೂಲಕ ನಿರ್ದೇಶನ ನೀಡಬಹುದು ಮತ್ತು ಕುಲಪತಿಯವರು ಅಂಥ ನಿರ್ದೇಶನವನ್ನು ಪಾಲಿಸತಕ್ಕದ್ದು.

**32. ಸದಸ್ಯರು ಪರಿಶ್ರಮಧನ ಪಡೆಯಲು ಹಕ್ಕುಳ್ಳವರಾಗಿರುವುದಿಲ್ಲ.–** ಪ್ರಶಾಸನ ಸಭೆಯ ಸದಸ್ಯರು, ಶಾಸನದಲ್ಲಿ ನಿರ್ದಿಷ್ಟಪಡಿಸಿರಬಹುದಾದಂಥ ಪ್ರವಾಸಭತ್ಯೆ ಮತ್ತು ದಿನಭತ್ಯೆಯನ್ನು ಹೊರತುಪಡಿಸಿ ವಿಶ್ವವಿದ್ಯಾಲಯದಿಂದ ಯಾವುದೇ ಪರಿಶ್ರಮಧನವನ್ನು ಪಡೆಯಲು ಅರ್ಹರಾಗಿರತಕ್ಕದ್ದಲ್ಲ:

ಪರಂತು, ಈ ಪ್ರಕರಣದಲ್ಲಿರುವುದಾವುದೂ, ಯಾವೊಬ್ಬ ಸದಸ್ಯನು, ಆತ ಹೊಂದಿರುವ ಪದದ ಕಾರಣದಿಂದಾಗಿ ಅರ್ಹನಾಗಿರುವ ಉಪಲಬ್ಧಿಗಳನ್ನು ಪಡೆಯಲು ಅಡ್ಡಿಯುಂಟು ಮಾಡತಕ್ಕದ್ದಲ್ಲ.

**ಪ್ರಶಿಕ್ಷಣ ಪರಿಷತ್ತು**

**33. ಪ್ರಶಿಕ್ಷಣ ಪರಿಷತ್ತು.–** (1) ಈ ಮುಂದಿನ ಪದನಿಮಿತ್ತ ಮತ್ತು ಇತರೆ ಸದಸ್ಯರುಗಳನ್ನು ಒಳಗೊಂಡಂತೆ ಪ್ರಶಿಕ್ಷಣ ಪರಿಷತ್ತನ್ನು ಕುಲಾಧಿಪತಿಯವರು ರಚಿಸತಕ್ಕದ್ದು, ಎಂದರೆ:–

(ಎ) ಕುಲಪತಿಯವರು ಪ್ರಶಿಕ್ಷಣ ಪರಿಷತ್ತಿನ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು;

(ಬಿ) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್;

(ಸಿ) ಪ್ರೌಢಶಿಕ್ಷಣದ ಪ್ರಭಾರದಲ್ಲಿರುವ ಸರ್ಕಾರದ ಪ್ರಧಾನಕಾರ್ಯದರ್ಶಿಗಳು/ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ:

(ಡಿ) ಸರ್ಕಾರದ ಕಾರ್ಯದರ್ಶಿಗಳು, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಅಥವಾ ಸರ್ಕಾರದ ಅಪರ ಕಾರ್ಯದರ್ಶಿಗಳ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು - ಪದನಿಮಿತ್ತ ಸದಸ್ಯರು

(ಇ) ಸರ್ಕಾರದ ಕಾರ್ಯದರ್ಶಿಗಳು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಅಥವಾ ಸರ್ಕಾರದ ಜಂಟಿ ಕಾರ್ಯದರ್ಶಿಗಳ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು - ಪದನಿಮಿತ್ತ ಸದಸ್ಯರು

(ಎಫ್) ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತರು, ಬೆಂಗಳೂರು ಅಥವಾ ಕಾಲೇಜು ಶಿಕ್ಷಣ ಇಲಾಖೆಯ ಅಪರ ಆಯುಕ್ತರ ದರ್ಜೆಗಿಂತ ಕಡಿಮೆಯಲ್ಲದ ಅವರ ನಾಮನಿರ್ದೇಶಿತರು;

(ಜಿ) ಭಾರತದ ರಾಷ್ಟ್ರೀಯ ಕಾನೂನು ವಿದ್ಯಾಲಯ ವಿಶ್ವವಿದ್ಯಾಲಯದ ನಿರ್ದೇಶಕರು, ಬೆಂಗಳೂರು;

(ಎಚ್) ಕುಲಪತಿಯವರು ಜ್ಯೇಷ್ಠತೆಯ ಕ್ರಮದಲ್ಲಿ ನಾಮನಿರ್ದೇಶನ ಮಾಡಿದ ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡ ಕಾನೂನು ಕಾಲೇಜುಗಳ ಹತ್ತು ಪ್ರಾಚಾರ್ಯರು;

(ಐ) ವಿಶ್ವವಿದ್ಯಾಲಯದ ಅಧ್ಯಯನ ಮತ್ತು ಸಂಶೋಧನಾ ವಿಭಾಗಗಳ ಅಧ್ಯಕ್ಷರುಗಳು;

(ಜೆ) ವಿಶ್ವವಿದ್ಯಾಲಯ ಗ್ರಂಥಾಲಯದ ಗ್ರಂಥಪಾಲಕ;

(ಕೆ) ಸರ್ಕಾರವು ನಾಮನಿರ್ದೇಶಿಸಿದ ಐದು ಸದಸ್ಯರು, ಅವರಲ್ಲಿ ಒಬ್ಬರು, ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಬುಡಕಟ್ಟಿಗೆ ಸೇರಿದ ವ್ಯಕ್ತಿಯಾಗಿರತಕ್ಕದ್ದು, ಒಬ್ಬರು ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ವ್ಯಕ್ತಿಯಾಗಿರತಕ್ಕದ್ದು ಮತ್ತು ಇತರೆ ಮೂರು ಜನರು ಕಾನೂನು ವೃತ್ತಿಯಲ್ಲಿರುವ ಅಥವಾ ಕಾನೂನು ಬೋಧನಾ ವಿಭಾಗಕ್ಕೆ ಸೇರಿದ ಸದಸ್ಯರಾಗಿದ್ದು ಅವರಲ್ಲಿ ಒಬ್ಬರು ಮಹಿಳೆಯಾಗಿರತಕ್ಕದ್ದು;

(ಎಲ್) ಸರ್ಕಾರದಿಂದ ನಾಮನಿರ್ದೇಶಿತರಾದ ಕರ್ನಾಟಕ ವಿಧಾನಮಂಡಲದ ಮೂರು ಜನ ಸದಸ್ಯರು, ಅವರಲ್ಲಿ, ಇಬ್ಬರು ವಿಧಾನಸಭೆಯ ಸದಸ್ಯರಾಗಿರತಕ್ಕದ್ದು ಮತ್ತು ಇನ್ನೊಬ್ಬರು ವಿಧಾನ ಪರಿಷತ್ತಿನ ಸದಸ್ಯರಾಗಿರತಕ್ಕದ್ದು;

(ಎಮ್) ಸರ್ಕಾರದಿಂದ ನಾಮನಿರ್ದೇಶಿತರಾದ ಸುಪ್ರಸಿದ್ಧ ಹಿರಿಯ ನ್ಯಾಯವಾದಿಗಳ ಪೈಕಿ ಇಬ್ಬರು ಸದಸ್ಯರು ಅವರಲ್ಲಿ ಒಬ್ಬರು ಮಹಿಳಾ ನ್ಯಾಯವಾದಿಯಾಗಿರತಕ್ಕದ್ದು;

(ಎನ್) ಕರ್ನಾಟಕ ನ್ಯಾಯವಾದಿ ಪರಿಷತ್ತಿನ (ಬಾರ್‌ಕೌನ್ಸಿಲಿನ) ಸದಸ್ಯರುಗಳ ಪೈಕಿಯಿಂದ ನಾಮನಿರ್ದೇಶಿತರಾದ ಒಬ್ಬ ಸದಸ್ಯರು.

(2) ಒಬ್ಬ ವ್ಯಕ್ತಿಯು, ಪ್ರಶಿಕ್ಷಣ ಪರಿಷತ್ತಿನ ಸದಸ್ಯನಾಗಿರುವುದು ನಿಂತುಹೋದಲ್ಲಿ, ಅವನು, ಪ್ರಶಿಕ್ಷಣ ಪರಿಷತ್ತಿನ ತನ್ನ ಸದಸ್ಯತ್ವದ ಕಾರಣದಿಂದಾಗಿ ಸದಸ್ಯನಾಗಿರಬಹುದಾದ ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಸದಸ್ಯನಾಗಿರುವುದೂ ನಿಂತುಹೋಗತಕ್ಕದ್ದು.

(3) ಪ್ರಶಿಕ್ಷಣ ಪರಿಷತ್ತಿನ ಸದಸ್ಯರು, ನಿಯಮಿಸಬಹುದಾದಂಥ ದಿನಭತ್ಯೆ / ಪ್ರವಾಸ ಭತ್ಯೆಯ ಹೊರತು ವಿಶ್ವವಿದ್ಯಾಲಯದಿಂದ ಯಾವುದೇ ಪರಿಶ್ರಮಧನವನ್ನು ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದಲ್ಲ:

ಪರಂತು, ಈ ಉಪಪ್ರಕರಣದಲ್ಲಿರುವುದಾವುದೂ, ಯಾವೊಬ್ಬ ಸದಸ್ಯನು ಆತನು ಹೊಂದಿರುವ ಪದದ ಕಾರಣದಿಂದಾಗಿ ಪಡೆಯಲು ಅರ್ಹನಾಗಿರುವ ಸಾಮಾನ್ಯ ಉಪಲಬ್ಧಿಗಳನ್ನು ಪಡೆಯಲು ಅಡ್ಡಿಯುಂಟು ಮಾಡತಕ್ಕದ್ದಲ್ಲ.

(4) ಪದನಿಮಿತ್ತ ಸದಸ್ಯನನ್ನು ಹೊರತುಪಡಿಸಿ, ಪ್ರಶಿಕ್ಷಣ ಪರಿಷತ್ತಿನ ಒಬ್ಬ ಸದಸ್ಯನು, ತನ್ನ ಪದಾವಧಿಯು ಮುಕ್ತಾಯವಾಗುವುದಕ್ಕೆ ಮೊದಲು, ಯಾವುದೇ ಸಮಯದಲ್ಲಿ, ತನ್ನ ಸದಸ್ಯತ್ವಕ್ಕೆ ರಾಜೀನಾಮೆ ನೀಡಬಹುದು. ಅಂಥ ರಾಜೀನಾಮೆಯನ್ನು, ಸದಸ್ಯನು ಲಿಖಿತ ಪತ್ರದ ಮೂಲಕ ಕುಲಾಧಿಪತಿಗೆ ತಿಳಿಸತಕ್ಕದ್ದು ಮತ್ತು ಕುಲಾಧಿಪತಿಯವರು ರಾಜೀನಾಮೆಗೆ ಒಪ್ಪಿಗೆಯನ್ನು ನೀಡಿದ ದಿನಾಂಕದಿಂದ ರಾಜೀನಾಮೆಯು ಜಾರಿಗೆ ಬರತಕ್ಕದ್ದು.

**34. ಪ್ರಶಿಕ್ಷಣ ಪರಿಷತ್ತಿನ ಅಧಿಕಾರಗಳು.**- (1) ಪ್ರಶಿಕ್ಷಣ ಪರಿಷತ್ತು ವಿಶ್ವವಿದ್ಯಾಲಯದ ಪ್ರಶಿಕ್ಷಣ ನಿಕಾಯವಾಗಿರತಕ್ಕದ್ದು ಮತ್ತು ಈ ಅಧಿನಿಯಮದ, ಶಾಸನಗಳ, ಪರ್ಯಾದೇಶಗಳ ಮತ್ತು ವಿನಿಯಮಗಳ ಉಪಬಂಧಗಳಿಗೆ ಒಳಪಟ್ಟು ವಿಶ್ವವಿದ್ಯಾಲಯದ ಶಿಕ್ಷಣ, ವಿದ್ಯಾಭ್ಯಾಸ ಮತ್ತು ಪರೀಕ್ಷೆಗಳ ಗುಣಮಟ್ಟದ ನಿಯಂತ್ರಣ ಹಾಗೂ ಸಾಮಾನ್ಯ ನಿಯಂತ್ರಣ ಹೊಂದಿರತಕ್ಕದ್ದು ಮತ್ತು ಅವುಗಳ ಗುಣಮಟ್ಟಗಳನ್ನು ಕಾಪಾಡುವ ಜವಾಬ್ದಾರಿಯನ್ನು ಹೊಂದಿರತಕ್ಕದ್ದು.

(2) ಹಿಂದೆ ಹೇಳಿದ ಉಪಬಂಧಗಳ ಸಾಮಾನ್ಯ ಅನ್ವಯಕ್ಕೆ ಬಾಧಕವಾಗದಂತೆ ಹಾಗೂ ಈ ಅಧಿನಿಯಮದ ಉಪಬಂಧಗಳ ಮೂಲಕ ಅಥವಾ ಅಡಿಯಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಷರತ್ತುಗಳಿಗೊಳಪಟ್ಟು ಪ್ರಶಿಕ್ಷಣ ಪರಿಷತ್ತು ಈ ಮುಂದಿನ ಅಧಿಕಾರಗಳನ್ನು ಚಲಾಯಿಸತಕ್ಕದ್ದು, ಎಂದರೆ:-

(i) ಪ್ರಶಿಕ್ಷಣ ವಿಷಯಗಳಿಗೆ ಸಂಬಂಧಪಟ್ಟಂತೆ ಪರ್ಯಾದೇಶಗಳನ್ನು ಹೊರಡಿಸಲು ಪ್ರಸ್ತಾವನೆಗಳನ್ನು ಮಾಡುವುದು;

(ii) ಪರ್ಯಾದೇಶಗಳಲ್ಲಿ ಒಳಗೊಂಡಿರದಷ್ಟರಮಟ್ಟಿಗೆ ಅಧ್ಯಯನ ಕ್ರಮಗಳಿಗೆ ಸಂಬಂಧಿಸಿದಂತೆ ವಿನಿಯಮಗಳನ್ನು ರಚಿಸುವುದು;

(iii) ಪರೀಕ್ಷೆಗಳ ವಿನ್ಯಾಸಗಳಿಗೆ ಸಂಬಂಧಿಸಿದಂತೆ ಮತ್ತು ಯಾವ ಷರತ್ತುಗಳಿಗೆ ಒಳಪಟ್ಟು ಪರೀಕ್ಷೆಗಳು, ಪದವಿಗಳು, ಡಿಪ್ಲೋಮಾಗಳು, ಪ್ರಮಾಣ ಪತ್ರಗಳು ಅಥವಾ ಇತರೆ ಶಿಕ್ಷಣ ಪ್ರಶಸ್ತಿಗಳಿಗೆ ವಿದ್ಯಾರ್ಥಿಗಳಿಗೆ ಪ್ರವೇಶ ಕೊಡತಕ್ಕದ್ದೋ, ಅಂಥ ಷರತ್ತುಗಳಿಗೆ ಸಂಬಂಧಿಸಿದಂತೆ ವಿನಿಯಮಗಳನ್ನು ರಚಿಸುವುದು;

(iv) ವಿಶ್ವವಿದ್ಯಾಲಯದ ವಿವಿಧ ಪರೀಕ್ಷೆಗಳ ಫಲಿತಾಂಶಗಳನ್ನು ಘೋಷಿಸಲು ವಿನಿಯಮಗಳನ್ನು ರಚಿಸುವುದು;

(v) ಕಾಲೇಜುಗಳಲ್ಲಿ ಮತ್ತು ಮನ್ನಣೆ ಪಡೆದ ಸಂಸ್ಥೆಗಳಲ್ಲಿ, ಅಧ್ಯಯನ ಹಾಗೂ ಬೋಧನೆಯ ಸಮನ್ವಯತೆಗಾಗಿ ವಿನಿಯಮಗಳನ್ನು ಮಾಡುವುದು;

(vi) ವಿಶ್ವವಿದ್ಯಾಲಯದಲ್ಲಿ ಸಂಶೋಧನೆಯನ್ನು ವೃದ್ಧಿಪಡಿಸುವುದಕ್ಕಾಗಿ ಮತ್ತು ಇತರ ವಿಶೇಷ ಅಧ್ಯಯನಗಳನ್ನು ವೃದ್ಧಿಪಡಿಸುವುದಕ್ಕಾಗಿ ಕಾರ್ಯ ಯೋಜನೆಗಳನ್ನು ರೂಪಿಸುವುದು;

(vii) ಫ್ಯಾಕಲ್ಟಿಗಳಿಗೆ ವಿಷಯಗಳನ್ನು ಹಂಚಿಕೆ ಮಾಡಲು ಮತ್ತು ಫ್ಯಾಕಲ್ಟಿಗಳಿಗೆ ತನ್ನದೇ ಆದ ಸದಸ್ಯರನ್ನು ನೇಮಿಸುವುದಕ್ಕಾಗಿ ಪ್ರಸ್ತಾವ ಸಲ್ಲಿಸುವುದು;

(viii) ಪರೀಕ್ಷೆಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಸಂಬಂಧಿಸಿದಂತೆ ವಿನಾಯತಿಗಳ ನೀಡಿಕೆಗಾಗಿ ಮಾನದಂಡವನ್ನು ನಿಗದಿಪಡಿಸುವುದು;

(ix) ವಿಶ್ವವಿದ್ಯಾಲಯಕ್ಕೆ ಅಗತ್ಯವಿರುವ ಪ್ರಾಧ್ಯಾಪಕರುಗಳು, ಪ್ರವಾಚಕರುಗಳ, ಉಪನ್ಯಾಸಕರ ಮತ್ತು ಇತರ ಅಧ್ಯಾಪಕರ ಹುದ್ದೆಗಳನ್ನು ಪ್ರಾರಂಭಿಸಲು ಮತ್ತು ಅಂಥ ಹುದ್ದೆಗಳ ಕರ್ತವ್ಯಗಳನ್ನು ನಿಯಮಿಸಲು ಪ್ರಸ್ತಾವಗಳನ್ನು ಸಲ್ಲಿಸುವುದು;

(x) ಫೆಲೋಷಿಪ್‌ಗಳು, ಸಂಚಾರಿ ಫೆಲೋಷಿಪ್‌ಗಳು, ವಿದ್ಯಾರ್ಥಿ ವೇತನ, ಶಿಷ್ಯವೇತನ, ಅಥವಾ ಪ್ರವೇತನಗಳನ್ನು ಸ್ಥಾಪಿಸುವುದಕ್ಕಾಗಿ ಮತ್ತು ಅವುಗಳನ್ನು ನೀಡುವುದಕ್ಕಾಗಿ ಪ್ರಸ್ತಾವಗಳನ್ನು ಸಲ್ಲಿಸುವುದು;

(xi) ಪರೀಕ್ಷೆಗಳ ಸಮಾನತೆಯನ್ನು ನಿಯಮಿಸಲು ವಿನಿಯಮಗಳನ್ನು ರಚಿಸುವುದು;

(xii) ಪದವಿಗಳು, ಡಿಪ್ಲೋಮಾಗಳು ಮತ್ತು ಇತರ ಪ್ರಶಿಕ್ಷಣ ಪ್ರಶಸ್ತಿಗಳಿಗೆ ಅರ್ಹತೆ ಪಡೆಯುವುದಕ್ಕಾಗಿ ವಿಶ್ವವಿದ್ಯಾಲಯದಲ್ಲಿ ಅಥವಾ ಸಂಯೋಜನೆಗೊಂಡ ಕಾಲೇಜುಗಳಲ್ಲಿ ಅಧ್ಯಯನ ಮಾಡಬೇಕಾದ ಅನುಮೋದಿತ ವ್ಯಾಸಂಗ ಕ್ರಮಗಳಿಂದ ವಿನಾಯಿತಿಗಳನ್ನು ನೀಡುವುದಕ್ಕಾಗಿ ವಿನಿಯಮಗಳನ್ನು ರಚಿಸುವುದು;

(xiii) ಸಂಶೋಧನೆ ಮತ್ತು ಜ್ಞಾನ ಪ್ರಗತಿಗಾಗಿ ಮತ್ತು ಪ್ರಸಾರಕ್ಕಾಗಿ ಸೂಕ್ತವೆಂದು ಭಾವಿಸಬಹುದಾದಂಥ ಕಲಿಕೆ ಮತ್ತು ಅಧ್ಯಯನ ಕ್ರಮಗಳ ವಿಭಾಗಗಳಲ್ಲಿ ಶಿಕ್ಷಣ, ಬೋಧನೆ ಮತ್ತು ತರಬೇತಿಗಾಗಿ ಅವಕಾಶ ಕಲ್ಪಿಸುವುದು;

(xiv) ಸಂಯೋಜನೆಗೊಂಡ ಕಾಲೇಜುಗಳು ಮತ್ತು ಮನ್ನಣೆ ಪಡೆದ ಸಂಸ್ಥೆಗಳನ್ನು ವಿಶೇಷ ಅಧ್ಯಯನ ಕೈಗೊಳ್ಳಲು ಸಮರ್ಥವಾಗುವಂತೆ ಮಾಡಲು ಅವಕಾಶ ಕಲ್ಪಿಸುವುದು;

(xv) ವಾರ್ಷಿಕ ಹಣಕಾಸು ಅಂದಾಜುಗಳನ್ನು ಪರಿಗಣಿಸುವುದು;

(xvi) ಯಾವುದೇ ವಿನಿಯಮವನ್ನು ತಿದ್ದುಪಡಿ ಮಾಡುವುದು ಅಥವಾ ನಿರಸನಗೊಳಿಸುವುದು;

(xvii) ವಿಶ್ವವಿದ್ಯಾಲಯದ ವಿವಿಧ ಪ್ರಾಧಿಕಾರಗಳಿಗೆ ಸದಸ್ಯರನ್ನು ನಾಮನಿರ್ದೇಶಿಸುವುದು;

(xviii) ಈ ಅಧಿನಿಯಮದ ಮೂಲಕ ಅಥವಾ ಅದರಡಿಯಲ್ಲಿ ಅದಕ್ಕೆ ಪ್ರದಾನ ಮಾಡಬಹುದಾದಂಥ ಇತರೆ ಅಧಿಕಾರಗಳನ್ನು ಚಲಾಯಿಸುವುದು ಮತ್ತು ವಿಧಿಸಬಹುದಾದಂಥ ಇತರ ಕರ್ತವ್ಯಗಳನ್ನು ನೆರವೇರಿಸುವುದು;

(xix) ಸಂಶೋಧನಾ ಮತ್ತು ವಿಶೇಷ ಅಧ್ಯಯನಗಳ ವಿಭಾಗಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು; ಮತ್ತು

(xx) ಸಾಮಾನ್ಯವಾಗಿ ಪ್ರಶಿಕ್ಷಣಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆ ವಿಶ್ವವಿದ್ಯಾಲಯಕ್ಕೆ ಸಲಹೆ ನೀಡುವುದು.

**35. ಪ್ರಶಿಕ್ಷಣ ಪರಿಷತ್ತಿನ ಸಭೆ.**- (1) ಪ್ರಶಿಕ್ಷಣ ಪರಿಷತ್ತು, ಕುಲಪತಿಯವರು ನಿಗದಿಪಡಿಸಬಹುದಾದ ದಿನಾಂಕಗಳಂದು, ಪ್ರತಿ ಮೂರು ತಿಂಗಳುಗಳಿಗೆ ಒಂದು ಬಾರಿಯಾದರೂ ಸಭೆ ಸೇರತಕ್ಕದ್ದು. ಅಂಥ ಸಭೆಗಳಲ್ಲಿ ಒಂದನ್ನು ವಾರ್ಷಿಕ ಸಭೆಯೆಂದು ಕರೆಯತಕ್ಕದ್ದು.

(2) ಒಟ್ಟು ಸದಸ್ಯರ ಸಂಖ್ಯೆಯಲ್ಲಿ ಮೂರನೇ ಒಂದರಷ್ಟು ಸಂಖ್ಯೆಯ ಸದಸ್ಯರು ಪ್ರಶಿಕ್ಷಣ ಪರಿಷತ್ತಿನ ಸಭೆಗಾಗಿ ಅಗತ್ಯಪಡಿಸಲಾದ ಕೋರಂ ಆಗಿರತಕ್ಕದ್ದು:

ಪರಂತು, ವಿಶ್ವವಿದ್ಯಾಲಯದ ಘಟಿಕೋತ್ಸವ ಸಂದರ್ಭದಲ್ಲಿ ಅಥವಾ ಪದವಿಗಳು, ಬಿರುದುಗಳು, ಡಿಪ್ಲೋಮಾಗಳು ಅಥವಾ ಇತರೆ ಪ್ರಶಿಕ್ಷಣ ಪ್ರಶಸ್ತಿಗಳನ್ನು ನೀಡುವ ಉದ್ದೇಶಕ್ಕಾಗಿ ನಡೆಯುವ ಪ್ರಶಿಕ್ಷಣ ಪರಿಷತ್ತಿನ ಸಭೆಯಲ್ಲಿ ಅಂಥ ಕೋರಂ ಅಗತ್ಯವಿರಬೇಕಾಗಿಲ್ಲ.

(3) ಕುಲಪತಿಯವರು, ತಾವು ಸೂಕ್ತವೆಂದು ಭಾವಿಸಿದಾಗಲೆಲ್ಲಾ ಮತ್ತು ಪ್ರಶಿಕ್ಷಣ ಪರಿಷತ್ತಿನ ಒಟ್ಟು ಸದಸ್ಯರುಗಳ ಪೈಕಿ ಶೇಕಡಾ ಐವತ್ತರಷ್ಟಕ್ಕೆ ಕಡಿಮೆ ಇಲ್ಲದ ಸದಸ್ಯರು ಸಹಿ ಮಾಡಿದ ಲಿಖಿತ ಕಡ್ಡಾಯ ಕೋರಿಕೆಯ ಮೇಲೆ ಪ್ರಶಿಕ್ಷಣ ಪರಿಷತ್ತಿನ ವಿಶೇಷ ಸಭೆಯನ್ನು ಕರೆಯತಕ್ಕದ್ದು.

**36. ಸದಸ್ಯತ್ವಕ್ಕೆ ಅನರ್ಹತೆ.**- (1) ಒಬ್ಬ ವ್ಯಕ್ತಿಯು, ತನ್ನ ನಾಮನಿರ್ದೇಶನದ ದಿನಾಂಕದಂದು,-

(ಎ) ಅಸ್ವಸ್ಥ ಚಿತ್ತದವನಾಗಿದ್ದರೆ ಅಥವಾ ಕಿವುಡ, ಮೂಕನಾಗಿದ್ದರೆ; ಅಥವಾ

(ಬಿ) ಅವಿಮುಕ್ತ ದಿವಾಳಿಯೆಂದು ನ್ಯಾಯನಿರ್ಣೀತನಾಗಿದ್ದರೆ;

(ಸಿ) ನೈತಿಕ ಅಧಃಪತನವನ್ನು ಒಳಗೊಂಡ ಯಾವುದೇ ಅಪರಾಧಕ್ಕಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಕಾರಾವಾಸ ಶಿಕ್ಷೆಯಿಂದ ಶಿಕ್ಷಿಸಲ್ಪಟ್ಟಿದ್ದರೆ,

- ಅವನು ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಸದಸ್ಯನಾಗಿ ನಾಮನಿರ್ದೇಶಿತನಾಗಲು ಅಥವಾ ಸದಸ್ಯ ನಾಗಿ ಮುಂದುವರೆಯಲು ಅನರ್ಹನಾಗಿರತಕ್ಕದ್ದು.

(2) ಒಬ್ಬ ವ್ಯಕ್ತಿಯು (1)ನೇ ಉಪ ಪ್ರಕರಣದ ಅಡಿಯಲ್ಲಿ ಅನರ್ಹನೇ ಅಲ್ಲವೇ ಎಂಬ ಬಗ್ಗೆ ವಿವಾದ ಅಥವಾ ಸಂದೇಹ ಉಂಟಾದಲ್ಲಿ, ಪ್ರಶಿಕ್ಷಣ ಪರಿಷತ್ತಿನ ತೀರ್ಮಾನವು ಅಂತಿಮವಾಗಿರತಕ್ಕದ್ದು.

**37. ಪ್ರಶಿಕ್ಷಣ ಪರಿಷತ್ತಿನ ಮತ್ತು ಪ್ರಶಾಸನ ಸಭೆಯ ಸದಸ್ಯರ ಪದಾವಧಿ.**- (1) ಅನ್ಯಥಾ ಉಪಬಂಧಿಸಿದುದನ್ನುಳಿದು, ಪದನಿಮಿತ್ತ ಸದಸ್ಯರುಗಳನ್ನು ಹೊರತುಪಡಿಸಿ, ಪ್ರಶಿಕ್ಷಣ ಪರಿಷತ್ತಿನ ಮತ್ತು ಪ್ರಶಾಸನ ಸಭೆಯ ಸದಸ್ಯರ ಪದಾವಧಿಯು ಮೂರು ವರ್ಷಗಳು ಅಥವಾ ಪುನರ್ ರಚನೆಯಾಗುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಆ ಅವಧಿಯಾಗಿರತಕ್ಕದ್ದು.

(2) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ ಪ್ರಶಿಕ್ಷಣ ಪರಿಷತ್ತನ್ನು ಮತ್ತು ಪ್ರಶಾಸನ ಸಭೆಯನ್ನು ಕುಲಾಧಿಪತಿಯವರು ಮೂರು ವರ್ಷಗಳಿಗೊಮ್ಮೆ ಪುನರ್ ರಚಿಸತಕ್ಕದ್ದು.

**38. ಪ್ರಾಧಿಕಾರಗಳ ಸದಸ್ಯತ್ವವನ್ನು ಹೊಂದಲು ನಿರ್ಬಂಧಗಳು.**- (1) ಈ ಅಧಿನಿಯಮದ ಅಡಿಯಲ್ಲಿ ಯಾವುವೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ಸದಸ್ಯನು, ನಾಮನಿರ್ದೇಶನ ಮಾಡುವ ಸಂಬಂಧಪಟ್ಟ ಪ್ರಾಧಿಕಾರದ ಇಷ್ಟಪರ್ಯಂತ ಪದಧಾರಣ ಮಾಡತಕ್ಕದ್ದು.

(2) ಈ ಅಧಿನಿಯಮದ ಅಡಿಯಲ್ಲಿ ಯಾವುವೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ವ್ಯಕ್ತಿಯು ಎರಡನೇ ಅವಧಿಗಾಗಿ ನಾಮನಿರ್ದೇಶನ ಹೊಂದಲು ಅಥವಾ ಚುನಾಯಿತನಾಗಲು ಅರ್ಹನಾಗಿರತಕ್ಕದ್ದಲ್ಲ.

(3) ಯಾವುವೇ ಪ್ರಾಧಿಕಾರಗಳಿಗೆ ನಾಮನಿರ್ದೇಶಿತನಾದ ಯಾವೊಬ್ಬ ಸದಸ್ಯನು, ದುರ್ವರ್ತನೆ ಅಥವಾ ದುರ್ನಡತೆ ಆಧಾರದ ಮೇಲೆ ಅಥವಾ ಅನ್ಯಥಾ ವಿಚಾರಣೆಯನ್ನು ನಡೆಸಿದ ತರುವಾಯ ಕುಲಾಧಿಪತಿಯಿಂದ ಯಾವುದೇ ಕಾಲದಲ್ಲಿ ಅಂಥ ಸದಸ್ಯತ್ವದಿಂದ ತೆಗೆದು ಹಾಕಲ್ಪಡುವುದಕ್ಕೆ ಗುರಿಯಾಗತಕ್ಕದ್ದು:

ಪರಂತು, ಪ್ರಶಿಕ್ಷಣ ಪರಿಷತ್ತು ಅಥವಾ ಪ್ರಶಾಸನ ಸಭೆಯ ಯಾವೊಬ್ಬ ಸದಸ್ಯನು ನಿವೃತ್ತಿ ವಯಸ್ಸನ್ನು ತಲುಪಿದ ನಂತರ ಆತನ ಸದಸ್ಯತ್ವವು ನಿಂತುಹೋಗತಕ್ಕದ್ದು.

(4) ಈ ಅಧ್ಯಾದೇಶದ ಅಡಿಯಲ್ಲಿ ಅನ್ಯಥಾ ಉಪಬಂಧಿಸಿದುದನ್ನುಳಿದು, ಕಾನೂನಿನ ಮೂಲಕ ಸ್ಥಾಪಿತವಾದ ಯಾವುದೇ ವಿಶ್ವವಿದ್ಯಾಲಯದ ಪದವೀಧರನಲ್ಲದ ಯಾವೊಬ್ಬ ವ್ಯಕ್ತಿಯು ಈ ಅಧ್ಯಾದೇಶದ ಅಡಿಯಲ್ಲಿ ಯಾವುವೇ ಪ್ರಾಧಿಕಾರಗಳ ಸದಸ್ಯನಾಗಿ ನಾಮನಿರ್ದೇಶಿತನಾಗಲು ಅರ್ಹನಾಗಿರತಕ್ಕದ್ದಲ್ಲ.

(5) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ ಆದರೆ ಅನ್ಯಥಾ ಉಪಬಂಧಿಸಿದುದನ್ನುಳಿದು, ವಿಶ್ವವಿದ್ಯಾಲಯದ ಬೋಧಕ ಮತ್ತು ಬೋಧಕೇತರ ಅಥವಾ ಲಿಪಿಕ ವರ್ಗದ ಯಾವೊಬ್ಬ ನೌಕರನು ಅಥವಾ ಸಂಯೋಜಿತ ಕಾಲೇಜಿನ ಆಡಳಿತದಲ್ಲಿ ಯಾವುದೇ ಸಾಮರ್ಥ್ಯದಲ್ಲಿರುವ ವ್ಯಕ್ತಿಯು ಈ ಅಧ್ಯಾದೇಶದ ಅಡಿಯಲ್ಲಿ ಯಾವುವೇ ಪ್ರಾಧಿಕಾರಗಳ ಸದಸ್ಯನಾಗಿ ನಾಮನಿರ್ದೇಶಿತನಾಗಲು ಅರ್ಹನಾಗಿರತಕ್ಕದ್ದಲ್ಲ.

**39. ಹಣಕಾಸು ಸಮಿತಿ.**– (1) ಹಣಕಾಸು ಸಮಿತಿಯು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಕುಲಪತಿ; – ಪದನಿಮಿತ್ತ ಅಧ್ಯಕ್ಷ;

(ಬಿ) ಕಾನೂನು ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿಯವರ, ಅಪರ ಕಾರ್ಯದರ್ಶಿಗಳ ದರ್ಜೆಗಿಂತ ಕಡಿಮೆಯಿಲ್ಲದ ಒಬ್ಬ ಪ್ರತಿನಿಧಿ;

(ಸಿ) ಆರ್ಥಿಕ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿಯವರ, ಉಪಕಾರ್ಯದರ್ಶಿಯವರ ದರ್ಜೆಗಿಂತ ಕಡಿಮೆಯಿಲ್ಲದ ಒಬ್ಬ ಪ್ರತಿನಿಧಿ;

(ಡಿ) ಪ್ರಶಾಸನ ಸಭೆಯು ತನ್ನ ಸದಸ್ಯರ ಪೈಕಿಯಿಂದ ನಾಮನಿರ್ದೇಶಿಸಿದ ಇಬ್ಬರು ಸದಸ್ಯರು, ಅವರಲ್ಲಿ ಒಬ್ಬರು ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿರತಕ್ಕದ್ದು ಮತ್ತು ಒಬ್ಬರು ಸರ್ಕಾರವು ಪ್ರಶಾಸನ ಸಭೆಗೆ ನಾಮನಿರ್ದೇಶಿಸಿದ ವ್ಯಕ್ತಿಯಾಗಿರತಕ್ಕದ್ದು ;

(ಇ) ಪ್ರಶಿಕ್ಷಣ ಪರಿಷತ್ತಿನಿಂದ ನಾಮನಿರ್ದೇಶಿತರಾದ ಒಬ್ಬ ಸದಸ್ಯ. ಮತ್ತು

(ಎಫ್) ಕುಲಸಚಿವರು ಒಬ್ಬ ಸದಸ್ಯರಾಗಿರತಕ್ಕದ್ದು.

(2) ಹಣಕಾಸು ಅಧಿಕಾರಿಯು ಹಣಕಾಸು ಸಮಿತಿಯ ಪದನಿಮಿತ್ತ ಕಾರ್ಯದರ್ಶಿಯಾಗಿರತಕ್ಕದ್ದು.

(3) (1)ನೇ ಉಪ ಪ್ರಕರಣದ (ಡಿ) ಮತ್ತು (ಇ) ಖಂಡಗಳ ಅಡಿಯಲ್ಲಿ ಹಣಕಾಸು ಸಮಿತಿಗೆ ನಾಮನಿರ್ದೇಶಿತರಾದ ಸದಸ್ಯರು ಮೂರು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು.

(4) ಹಣಕಾಸು ಅಧಿಕಾರಿಯು ತಯಾರಿಸಿದ ವಾರ್ಷಿಕ ಲೆಕ್ಕಪತ್ರಗಳು ಮತ್ತು ಹಣಕಾಸು ಅಂದಾಜುಗಳನ್ನು ಪರಿಗಣನೆ ಮತ್ತು ಪರಾಮರ್ಶೆಗಾಗಿ ಹಣಕಾಸು ಸಮಿತಿಯ ಮುಂದೆ ಮಂಡಿಸತಕ್ಕದ್ದು.

(5) ಹಣಕಾಸು ಸಮಿತಿಯು ವಿಶ್ವವಿದ್ಯಾಲಯದ ಆದಾಯ ಮತ್ತು ಸಂಪನ್ಮೂಲಗಳ ಆಧಾರದ ಮೇಲೆ ಆ ವರ್ಷಕ್ಕಾಗಿ ಆವರ್ತಕ ವೆಚ್ಚದ ಹಾಗೂ ಒಟ್ಟು ಅನಾವರ್ತಕ ವೆಚ್ಚಗಳ ಮಿತಿಗಳನ್ನು ಶಿಫಾರಸ್ಸು ಮಾಡತಕ್ಕದ್ದು, ಉತ್ಪಾದಕ ಕಾಮಗಾರಿಗಳ ಸಂದರ್ಭದಲ್ಲಿ ಸಂಪನ್ಮೂಲವು ಸಾಲಗಳಿಂದ ಬರುವ ಉತ್ಪನ್ನಗಳನ್ನು ಒಳಗೊಳ್ಳಬಹುದು.

(6) ಹಣಕಾಸು ಸಮಿತಿಯು,–

(i) ಲೆಕ್ಕಪತ್ರಗಳನ್ನು ಪರಿಶೀಲಿಸಲು ಮತ್ತು ವೆಚ್ಚಗಳ ಪ್ರಸ್ತಾವಗಳನ್ನು ಪರಿಶೋಧಿಸಲು ಮೂರು ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು;

(ii) ಕಾಲ ಕಾಲಕ್ಕೆ ವಿಶ್ವವಿದ್ಯಾಲಯ ಹಣಕಾಸಿನ ಪರಿಸ್ಥಿತಿಯನ್ನು ಪುನರವಲೋಕಿಸತಕ್ಕದ್ದು;

(iii) ವಾರ್ಷಿಕ ಹಣಕಾಸು ಅಂದಾಜಿನಲ್ಲಿ ಅವಕಾಶವನ್ನು ಕಲ್ಪಿಸಿಲ್ಲದ ಮತ್ತು ವಾರ್ಷಿಕ ಹಣಕಾಸು ಅಂದಾಜಿನಲ್ಲಿ ಒದಗಿಸಿದ ಮೊಬಲಗಿಗಿಂತ ಹೆಚ್ಚಿನ ವೆಚ್ಚವನ್ನು ಒಳಗೊಂಡ ಪ್ರತಿಯೊಂದು ಪ್ರಸ್ತಾವಗಳ ಮೇಲೆ ಪ್ರಶಾಸನ ಸಭೆಗೆ ಶಿಫಾರಸ್ಸುಗಳನ್ನು ಮಾಡತಕ್ಕದ್ದು;

(iv) ವಿಶ್ವವಿದ್ಯಾಲಯದ ಲೆಕ್ಕ ಪತ್ರಗಳ ನಿರ್ವಹಣೆಯ ವಿಧಾನಗಳು ಮತ್ತು ಕಾರ್ಯವಿಧಾನಗಳನ್ನು ಹಾಗೂ ನಮೂನೆಗಳನ್ನು ನಿಯಮಿಸತಕ್ಕದ್ದು;

(v) ವಿಶ್ವವಿದ್ಯಾಲಯದ ಹಣಕಾಸಿನ ಸಂಬಂಧದ ಎಲ್ಲಾ ವಿಷಯಗಳಲ್ಲಿ ಪ್ರಶಾಸನ ಸಭೆಗೆ ಶಿಫಾರಸ್ಸುಗಳನ್ನು ಮಾಡತಕ್ಕದ್ದು; ಮತ್ತು

(vi) ಶಾಸನದ ಮೂಲಕ ನಿಯಮಿಸಬಹುದಾದಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**40 ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಳಿ.–** (1) ವಿಶ್ವವಿದ್ಯಾಲಯದ ಯೋಜನೆ ಮತ್ತು ಅಭಿವೃದ್ಧಿಯ ಬಗ್ಗೆ ಸಾಮಾನ್ಯವಾಗಿ ಸಲಹೆಯನ್ನು ನೀಡಲು ಹಾಗೂ ವಿಶ್ವವಿದ್ಯಾಲಯದಲ್ಲಿ ಶೈಕ್ಷಣಿಕ ಮತ್ತು ಸಂಶೋಧನೆಯ ಗುಣಮಟ್ಟಗಳ ಬಗ್ಗೆ ಪುನರ್ವಿಮರ್ಶಿಸಲು ಒಂದು ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಳಿಯನ್ನು ಪ್ರಶಾಸನ ಸಭೆಯು ರಚಿಸತಕ್ಕದ್ದು.

(2) ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಳಿಯು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಕುಲಪತಿ – ಇವರು ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು; ಮತ್ತು

(ಬಿ) ಪ್ರಶಾಸನ ಸಭೆಯಿಂದ ಎಂಟು ವ್ಯಕ್ತಿಗಳನ್ನು ಮೀರದಂತೆ ನಾಮನಿರ್ದೇಶಿತರಾದ ಶ್ರೇಷ್ಠ ವಿದ್ವಾಂಸರು.

(3) ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಳಿಯು, ಈ ಅಧಿನಿಯಮದ ಮೂಲಕ ನಿಹಿತವಾದ ಇತರ ಎಲ್ಲಾ ಅಧಿಕಾರಗಳ ಜೊತೆಯಲ್ಲಿ ಯಾವುದೇ ಶೈಕ್ಷಣಿಕ ವಿಷಯಗಳ ಬಗ್ಗೆ ಪ್ರಶಾಸನ ಸಭೆಗೆ ಮತ್ತು ಪ್ರಶಿಕ್ಷಣ ಪರಿಷತ್ತಿಗೆ ಸಲಹೆಗಳನ್ನು ನೀಡಲು ಅಧಿಕಾರವನ್ನು ಹೊಂದಿರತಕ್ಕದ್ದು.

(4) ಯೋಜನೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನ ಮಂಡಳಿಯ ನಾಮನಿರ್ದೇಶಿತ ಸದಸ್ಯರ ಪದಾವಧಿಯು ಮೂರು ವರ್ಷಗಳಾಗಿರತಕ್ಕದ್ದು ಮತ್ತು ಅವರು ಮತ್ತೊಂದು ಅವಧಿಗೆ ಪುನರ್ ನಾಮನಿರ್ದೇಶನಕ್ಕೆ ಅರ್ಹರಾಗಿರತಕ್ಕದ್ದು.

**41. ಅಧ್ಯಯನ ಮಂಡಳಿ.–** (1) ಬೋಧನೆಯ ಅಥವಾ ಸಂಶೋಧನೆಯ ಪ್ರತಿಯೊಂದು ವಿಭಾಗಕ್ಕೆ ಲಗತ್ತಾದಂತೆ ಒಂದು ಅಧ್ಯಯನ ಮಂಡಳಿ ಇರತಕ್ಕದ್ದು.

(2) ಅಧ್ಯಯನ ಮಂಡಳಿಯ ರಚನೆ ಮತ್ತು ಅಧಿಕಾರಗಳು ಪ್ರಶಾಸನ ಸಭೆಯು ನಿಯಮಿಸಬಹುದಾದಂತೆ ಇರತಕ್ಕದ್ದು.

**42. ಇತರ ಪ್ರಾಧಿಕಾರಗಳು.–** ಪ್ರಶಾಸನ ಸಭೆಯು, ಅವಶ್ಯವಾಗಬಹುದಾದಂಥ ವಿಶ್ವವಿದ್ಯಾಲಯದ ಇತರ ಪ್ರಾಧಿಕಾರಗಳನ್ನು ರಚಿಸಬಹುದು ಮತ್ತು ಅವುಗಳ ರಚನೆಯ ವಿಧಾನವನ್ನು ಮತ್ತು ಪ್ರಕಾರ್ಯಗಳನ್ನು ಶಾಸನಗಳಲ್ಲಿ ನಿಯಮಿಸತಕ್ಕದ್ದು.

**43. ಸಮಿತಿಗಳು.–** ವಿಶ್ವವಿದ್ಯಾಲಯದ ಪ್ರತಿಯೊಂದು ಪ್ರಾಧಿಕಾರವು, ತನ್ನ ಪ್ರಕಾರ್ಯಗಳಲ್ಲಿ ಸಹಾಯ ಮಾಡಲು ಸಮಿತಿಗಳನ್ನು ರಚಿಸಲು ಅಥವಾ ಪುನರ್ ರಚಿಸಲು ಹಾಗೂ ಅವುಗಳಿಗೆ ತಾನು ಸೂಕ್ತವೆಂದು ಭಾವಿಸಬಹುದಾದಂಥ ತನ್ನ ಅಧಿಕಾರಗಳನ್ನು ಪ್ರತ್ಯಾಯೋಜಿಸಲು ಅಧಿಕಾರವನ್ನು ಹೊಂದಿರತಕ್ಕದು. ಅಂಥ ಸಮಿತಿಗಳು ಅನ್ಯಥಾ ಉಪಬಂಧಿಸಿರುವಂತೆ ಉಳಿದು ಸಂಬಂಧಿಸಿದ ಪ್ರಾಧಿಕಾರದ ಸದಸ್ಯರನ್ನು ಮತ್ತು ಪ್ರತಿಯೊಂದು ಸಂದರ್ಭದಲ್ಲಿ ಆ ಪ್ರಾಧಿಕಾರವು ನಿರ್ದೇಶಿಸಬಹುದಾದಂಥ ಇತರ ವ್ಯಕ್ತಿಗಳನ್ನು ಒಳಗೊಂಡಿರತಕ್ಕದ್ದು.

**44. ಫ್ಯಾಕಲ್ಟಿಗಳು.–** (1) ತನ್ನ ಉದ್ದೇಶಗಳನ್ನು ಮತ್ತು ಪ್ರಕಾರ್ಯಗಳನ್ನು ಗಮನದಲ್ಲಿರಿಸಿಕೊಂಡು ಪ್ರತಿಯೊಂದು ವ್ಯಾಸಂಗ ಮತ್ತು ಸಂಶೋಧನೆ ವಿಷಯಗಳಿಗಾಗಿ ಶಾಸನಗಳ ಮೂಲಕ ನಿಯಮಿಸಬಹುದಾದಂಥ ಫ್ಯಾಕಲ್ಟಿಗಳನ್ನು ವಿಶ್ವವಿದ್ಯಾಲಯವು ಹೊಂದಿರತಕ್ಕದ್ದು.

(2) ಪ್ರತಿಯೊಂದು ಫ್ಯಾಕಲ್ಟಿಯು ಶಾಸನಗಳಲ್ಲಿ ನಿಯಮಿಸಬಹುದಾದಂಥ ಬೋಧನೆಯ ವಿಭಾಗಗಳನ್ನು ಒಳಗೊಂಡಿರತಕ್ಕದ್ದು.

**45. ಕುಲಪತಿ ಮತ್ತು ಇತರ ಅಧಿಕಾರಿಗಳು ಮುಂತಾದವರು, ಸಾರ್ವಜನಿಕ ನೌಕರರಾಗಿರತಕ್ಕದ್ದು.–** ವಿಶ್ವವಿದ್ಯಾಲಯದ ಕುಲಪತಿ, ಕುಲಸಚಿವ, ಹಣಕಾಸು ಅಧಿಕಾರಿ, ಕುಲಸಚಿವ (ಮೌಲ್ಯಮಾಪನ) ಮತ್ತು ಇತರ ಉದ್ಯೋಗಿಗಳು, ಈ ಅಧಿನಿಯಮದ ಯಾವುವೇ ಉಪಬಂಧಗಳನ್ನು ಅನುಸರಿಸಿ ಕಾರ್ಯನಿರ್ವಹಿಸುತ್ತಿರುವಾಗ ಅಥವಾ ಕಾರ್ಯನಿರ್ವಹಿಸುತ್ತಿರುವರೆಂದು ತಾತ್ಪರ್ಯವಾಗುವಾಗ ಭಾರತ ದಂಡ ಸಂಹಿತೆಯ 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಸಾರ್ವಜನಿಕ ನೌಕರರು ಎಂಬುದಾಗಿ ಭಾವಿಸತಕ್ಕದ್ದು.

## ಅಧ್ಯಾಯ – V

### ಶಾಸನಗಳು, ಪರ್ಯಾದೇಶಗಳು ಮತ್ತು ವಿನಿಯಮಗಳು

**46. ಶಾಸನಗಳು.–** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಶಾಸನಗಳು ಈ ಮುಂದಿನ ಎಲ್ಲ ಅಥವಾ ಯಾವುವೇ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸಬಹುದು, ಎಂದರೆ:–

(1) ಪದವಿಗಳನ್ನು, ಡಿಪ್ಲೋಮಾಗಳನ್ನು ಮತ್ತು ಇತರ ವಿದ್ಯಾ ಪ್ರಶಸ್ತಿಗಳನ್ನು ಪ್ರದಾನ ಮಾಡುವ ಸಲುವಾಗಿ ಘಟಿಕೋತ್ಸವಗಳನ್ನು ನಡೆಸುವುದು;

(2) ಗೌರವ ಪದವಿಗಳನ್ನು ಮತ್ತು ಇತರ ಪ್ರಶಸ್ತಿಗಳನ್ನು ನೀಡುವುದು;

(3) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ರಚನೆ, ಅಧಿಕಾರಗಳು ಮತ್ತು ಪ್ರಕಾರ್ಯಗಳು;

(4) ಪ್ರಾಧಿಕಾರಗಳ ಸದಸ್ಯರ ಸ್ಥಾನಗಳಲ್ಲಿ ಉಂಟಾದ ಖಾಲಿ ಸ್ಥಾನಗಳನ್ನು ಭರ್ತಿ ಮಾಡುವ ವಿಧಾನ;

(5) ಪ್ರಾಧಿಕಾರಗಳ ಮತ್ತು ಅದರ ಸಮಿತಿಗಳ ಸದಸ್ಯರುಗಳಿಗೆ ಸಂದಾಯವಾಗಬೇಕಾದ ಭತ್ಯೆಗಳು;

(6) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ಸಭೆಗಳ ಕಾರ್ಯವಿಧಾನ ಮತ್ತು ಅಂಥ ಸಭೆಗಳಲ್ಲಿನ ಕಾರ್ಯಕಲಾಪ ನಡೆಸಲು ಇರಬೇಕಾದ ಕೋರಂ;

(7) ವಿಶ್ವವಿದ್ಯಾಲಯದ ಪ್ರಾಧಿಕಾರಗಳ ನಿರ್ಣಯಗಳ ಆದೇಶಗಳನ್ನು ದೃಢೀಕರಿಸುವುದು;

(8) ವಿಶ್ವವಿದ್ಯಾಲಯದಲ್ಲಿ ಸಂಶೋಧನಾ ವಿಭಾಗಗಳ ರಚನೆ;

(9) ಕುಲಾಧಿಪತಿ ಮತ್ತು ಸಹಕುಲಾಧಿಪತಿಯವರುಗಳನ್ನು ಹೊರತುಪಡಿಸಿ, ವಿಶ್ವವಿದ್ಯಾಲಯದ ಅಧಿಕಾರಿಗಳ ಪದಾವಧಿ ಮತ್ತು ನೇಮಕಾತಿ ವಿಧಾನ ಮತ್ತು ಸೇವಾ ಷರತ್ತುಗಳು;

(10) ವಿಶ್ವವಿದ್ಯಾಲಯದಲ್ಲಿ ಮತ್ತು ಸಂಯೋಜಿತ ಕಾಲೇಜುಗಳಲ್ಲಿ ಅಥವಾ ಸಂಸ್ಥೆಗಳಲ್ಲಿ ನಿಯೋಜಿತರಾಗಿರುವ ಅಧ್ಯಾಪಕರ ಮತ್ತು ಇತರ ವ್ಯಕ್ತಿಗಳ ವಿದ್ಯಾರ್ಹತೆಗಳು;

(11) ವಿಶ್ವವಿದ್ಯಾಲಯದ ಮೂಲಕ ನಿಯೋಜಿತರಾಗಿರುವ ಅಧ್ಯಾಪಕರ ಮತ್ತು ಇತರ ವ್ಯಕ್ತಿಗಳ ವರ್ಗೀಕರಣ, ನೇಮಕಾತಿ ವಿಧಾನ ಮತ್ತು ಸೇವಾ ನಿಬಂಧನೆಗಳು ಹಾಗೂ ಷರತ್ತುಗಳ ನಿರ್ಧಾರಣೆ;

(12) ವಿಶ್ವವಿದ್ಯಾಲಯದ ಮೂಲಕ ನಿಯೋಜಿತರಾಗಿರುವ ಅಧಿಕಾರಿಗಳ, ಅಧ್ಯಾಪಕರ ಮತ್ತು ಇತರ ವ್ಯಕ್ತಿಗಳ ಪ್ರಯೋಜನಾರ್ಥವಾಗಿ ನಿವೃತ್ತಿ ವೇತನ, ಉಪದಾನ, ವಿಮೆ ಅಥವಾ ಭವಿಷ್ಯ ನಿಧಿಯನ್ನು ಪ್ರಾರಂಭಿಸುವುದು;

(13) ಫೆಲೋಶಿಪ್, ಸಂಚಾರಿ ಫೆಲೋಶಿಪ್, ವಿದ್ಯಾರ್ಥಿ ವೇತನಗಳು, ಶಿಷ್ಯ ವೇತನಗಳು, ಪದಕಗಳು ಮತ್ತು ಬಹುಮಾನಗಳನ್ನು ಪ್ರಾರಂಭಿಸುವುದು ಮತ್ತು ಅವುಗಳನ್ನು ನೀಡುವುದಕ್ಕೆ ಸಂಬಂಧಪಟ್ಟ ಷರತ್ತುಗಳು;

(14) ವಿಶ್ವವಿದ್ಯಾಲಯಕ್ಕೆ ಕಾಲೇಜುಗಳ ಸಂಯೋಜನೆಗೆ ಸಂಬಂಧಿಸಿದ ಷರತ್ತುಗಳು;

(15) ಸ್ವಾಯತ್ತ ಕಾಲೇಜೆಂದು ಒಂದು ಕಾಲೇಜನ್ನು ನಾಮಾಂಕಿತಗೊಳಿಸುವ ವಿಧಾನ ಮತ್ತು ಅದಕ್ಕಾಗಿ ಪಾಲಿಸಬೇಕಾದ ಷರತ್ತುಗಳು ಹಾಗೂ ಹಾಗೆ ನಾಮಾಂಕಿತಗೊಳಿಸಿದ್ದನ್ನು ರದ್ದುಪಡಿಸಲು ಇರುವ ಷರತ್ತುಗಳು ಮತ್ತು ಅಧ್ಯಯನ ಮಂಡಳಿ ಹಾಗೂ ಪರೀಕ್ಷಾ ಮಂಡಳಿಗಳ ರಚನೆ ಅಥವಾ ಪುನಾರಚನೆ, ಅಧಿಕಾರ ಮತ್ತು ಕರ್ತವ್ಯಗಳು ಒಳಗೊಂಡಂತೆ ಸ್ವಾಯತ್ತ ಕಾಲೇಜುಗಳ ಆಡಳಿತಕ್ಕಾಗಿ ಪ್ರಾಸಂಗಿಕವಾದ ವಿಷಯಗಳು;

(16) ಪಡಸಾಲೆಗಳನ್ನು (ಹಾಲ್‌ಗಳನ್ನು) ಮತ್ತು ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು;

(17) ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳನ್ನು ಹೊರತುಪಡಿಸಿ ಇತರ ವಿದ್ಯಾರ್ಥಿನಿಲಯಗಳ ನಿಯಂತ್ರಣಕ್ಕಾಗಿ ಷರತ್ತುಗಳು;

(18) ಪಡಸಾಲೆಗಳಲ್ಲಿ ಮತ್ತು ವಿದ್ಯಾರ್ಥಿನಿಲಯಗಳಲ್ಲಿ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳ ನಿವಾಸಕ್ಕಾಗಿ ಷರತ್ತುಗಳು ಮತ್ತು ಅಂಥ ನಿವಾಸದ ಸಲುವಾಗಿ ಶುಲ್ಕಗಳು ಮತ್ತು ಇತರ ವೆಚ್ಚಗಳನ್ನು ವಿಧಿಸುವುದು;

(19) ಪದವೀಧರರನ್ನು ನೋಂದಣಿ ಮಾಡಿಕೊಳ್ಳುವುದಕ್ಕೆ ಸಂಬಂಧಿಸಿದ ಷರತ್ತುಗಳು ಮತ್ತು ಅದರ ರಿಜಿಸ್ಟರಿನ ನಿರ್ವಹಣೆ;

(20) ವಿಶ್ವವಿದ್ಯಾಲಯದ ಪ್ರಾಧಿಕಾರಗಳಲ್ಲಿ ಅಥವಾ ಅಧಿಕಾರಿಗಳಲ್ಲಿ ನಿಹಿತವಾದ ಅಧಿಕಾರಗಳ ಪ್ರತ್ಯಾಯೋಜನೆ; ಮತ್ತು

(21) ಶಾಸನಗಳ ಮೂಲಕ ನಿಯಮಿಸಬಹುದಾದಂಥ ಅಥವಾ ನಿಯಮಿಸಲು ಅಗತ್ಯಪಡಿಸಬಹುದಾದಂಥ ಯಾವುದೇ ಇತರ ವಿಷಯ.

**47. ಶಾಸನಗಳನ್ನು ರಚಿಸುವ ಬಗೆ.–** (1) ಪ್ರಶಾಸನ ಸಭೆಯು ಈ ಪ್ರಕರಣದಲ್ಲಿ ಇನ್ನು ಮುಂದೆ ಉಪಬಂಧಿಸಿದ ವಿಧಾನದಲ್ಲಿ ಕಾಲಕಾಲಕ್ಕೆ ಶಾಸನಗಳನ್ನು ರಚಿಸಬಹುದು ಹಾಗೂ ಅವುಗಳನ್ನು ತಿದ್ದುಪಡಿ ಮಾಡಬಹುದು ಅಥವಾ ನಿರಸನಗೊಳಿಸಬಹುದು.

(2) ಪ್ರಶಿಕ್ಷಣ ಪರಿಷತ್ತು ಅಥವಾ ಕುಲಪತಿಯವರು ಯಾವುವೇ ಶಾಸನಗಳ ಅಥವಾ ಅವುಗಳಿಗೆ ಮಾಡಬೇಕಾದ ಯಾವುವೇ ತಿದ್ದುಪಡಿಗಳನ್ನು ಅಥವಾ ಶಾಸನದ ನಿರಸನದ ಪ್ರಸ್ತಾವದ ಕರಡನ್ನು ಪ್ರಶಾಸನ ಸಭೆಯ ಅಂಗೀಕಾರಕ್ಕಾಗಿ ಸಲ್ಲಿಸಬಹುದು ಮತ್ತು ಅಂಥ ಕರಡನ್ನು ಪ್ರಶಾಸನ ಸಭೆ ತನ್ನ ಮುಂದಿನ ಸಭೆಯಲ್ಲಿ ಪರಿಗಣಿಸತಕ್ಕದ್ದು:

ಪರಂತು, ಕುಲಪತಿಯವರು ವಿಶ್ವವಿದ್ಯಾಲಯದ ಯಾವುದೇ ಪ್ರಾಧಿಕಾರದ ಅಧಿಕಾರಗಳಿಗೆ ಮತ್ತು ರಚನೆಗೆ ಬಾಧಕವಾಗುವಂತೆ ಯಾವುವೇ ಶಾಸನಗಳಿಗೆ ಯಾವುವೇ ತಿದ್ದುಪಡಿಗಳನ್ನು ಮಾಡುವ ಪ್ರಸ್ತಾವಗಳನ್ನು, ಅಂಥ ಪ್ರಾಧಿಕಾರಕ್ಕೆ ತನ್ನ ಅಭಿಪ್ರಾಯವನ್ನು ಹೇಳಿಕೊಳ್ಳಲು ಅವಕಾಶವನ್ನು ನೀಡದೇ ಮಂಡಿಸತಕ್ಕದ್ದಲ್ಲ ಮತ್ತು ಹಾಗೆ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಪ್ರಶಾಸನ ಸಭೆ ಪರಿಗಣಿಸತಕ್ಕದ್ದು.

(3) ಪ್ರಶಿಕ್ಷಣ ಪರಿಷತ್ತು ಅಥವಾ ಕುಲಪತಿಯವರು (2)ನೇ ಉಪಪ್ರಕರಣದ ಅಡಿಯಲ್ಲಿ ಪ್ರಸ್ತಾವಿಸಿದ ಕರಡನ್ನು ಪ್ರಶಾಸನ ಸಭೆಯು ಪರಿಗಣಿಸಬಹುದು ಮತ್ತು ಆ ಕರಡನ್ನು ಅಂಗೀಕರಿಸಬಹುದು ಅಥವಾ ತಿರಸ್ಕರಿಸಬಹುದು ಅಥವಾ ತಿದ್ದುಪಡಿಗಳೊಡನೆ ಅಥವಾ ತಿದ್ದುಪಡಿಗಳಿಲ್ಲದೆ ಅದನ್ನು ಪುನರ್ ಪರಿಗಣನೆ ಮಾಡಲು ಸಂದರ್ಭಾನುಸಾರ ಪ್ರಶಿಕ್ಷಣ ಪರಿಷತ್ತಿಗೆ ಅಥವಾ ಕುಲಪತಿಯವರಿಗೆ ಹಿಂದಿರುಗಿಸಬಹುದು.

(4) (ಎ) ಪ್ರಶಾಸನ ಸಭೆಯ ಯಾವೊಬ್ಬ ಸದಸ್ಯನು, ಪ್ರಶಾಸನ ಸಭೆಗೆ ಕರಡು ಶಾಸನಗಳನ್ನು ಅಥವಾ ಶಾಸನಗಳ ತಿದ್ದುಪಡಿ ಅಥವಾ ನಿರಸನಕ್ಕಾಗಿ ಪ್ರಸ್ತಾವವನ್ನು ಸಲ್ಲಿಸಬಹುದು ಮತ್ತು ಪ್ರಶಾಸನ ಸಭೆಯು, ಆ ವಿಷಯವು ಪ್ರಶಿಕ್ಷಣ ಸಭೆಯ ಪರಿಮಿತಿಯಲ್ಲಿ ಬರುವಂತಹದಲ್ಲದಿದ್ದರೆ ಕರಡನ್ನು ಒಪ್ಪಿಕೊಳ್ಳಬಹುದು ಅಥವಾ ತಿರಸ್ಕರಿಸಬಹುದು.

(ಬಿ) ವಿಷಯವು ಪ್ರಶಿಕ್ಷಣ ಪರಿಷತ್ತಿನ ಪರಿಮಿತಿಯಲ್ಲಿ ಬರುತ್ತಿದ್ದರೆ ಅಂಥ ಕರಡನ್ನು ಪ್ರಶಾಸನ ಸಭೆಯು ಪ್ರಶಿಕ್ಷಣ ಪರಿಷತ್ತಿಗೆ ಪರಿಗಣನೆಗಾಗಿ ಕಳುಹಿಸತಕ್ಕದ್ದು. ಪ್ರಶಿಕ್ಷಣ ಪರಿಷತ್ತು, ಪ್ರಶಾಸನ ಸಭೆಗೆ ತಾನು ಕರಡನ್ನು ಒಪ್ಪಿಲ್ಲವೆಂದು ವರದಿ ಮಾಡಬಹುದು ಅಥವಾ ಪ್ರಶಿಕ್ಷಣ ಪರಿಷತ್ತು ಅಂಗೀಕರಿಸಬಹುದಾದ ರೂಪದಲ್ಲಿ ಕರಡನ್ನು ಪ್ರಶಾಸನ ಸಭೆಗೆ ಸಲ್ಲಿಸಬಹುದು ಮತ್ತು ಪ್ರಶಾಸನ ಸಭೆಯು ತಿದ್ದುಪಡಿ ಇಲ್ಲದೆ ಅಥವಾ ತಿದ್ದುಪಡಿಗಳೊಡನೆ ಕರಡನ್ನು ಅಂಗೀಕರಿಸಬಹುದು ಅಥವಾ ತಿರಸ್ಕರಿಸಬಹುದು.

(5) ಪ್ರಶಾಸನಸಭೆಯು, ಹಣಕಾಸಿನ ವಿಷಯಗಳನ್ನು ಒಳಗೊಂಡ ಶಾಸನಗಳ ಸಂಬಂಧದಲ್ಲಿ ಹಣಕಾಸು ಸಮಿತಿಯ ಅಭಿಪ್ರಾಯವನ್ನು ಪಡೆಯತಕ್ಕದ್ದು.

(6) ಪ್ರಶಾಸನ ಸಭೆಯು ಕರಡು ಶಾಸನಗಳ ಸಂಬಂಧದಲ್ಲಿ ಅವುಗಳನ್ನು ಪರಿಗಣಿಸುವುದಕ್ಕೆ ಮುಂಚೆ ತಾನು ಅವಶ್ಯವೆಂದು ಭಾವಿಸಿದರೆ, ವಿಶ್ವವಿದ್ಯಾಲಯದ ಯಾವೊಬ್ಬ ಅಧಿಕಾರಿಯ, ಪ್ರಾಧಿಕಾರದ ಅಥವಾ ನಿಕಾಯದ ಅಭಿಪ್ರಾಯವನ್ನು ಸಹ ಪಡೆಯಬಹುದು.

(7) ಪ್ರಶಾಸನ ಸಭೆಯು ಅಂಗೀಕರಿಸಿದ ಪ್ರತಿಯೊಂದು ಶಾಸನವನ್ನು, ತನ್ನ ನಿರ್ದಿಷ್ಟ ಶಿಫಾರಸ್ಸುಗಳೊಡನೆ ಅನುಮೋದನೆಗಾಗಿ ಕುಲಾಧಿಪತಿಯವರಿಗೆ ಒಪ್ಪಿಸುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(8) ರಾಜ್ಯ ಸರ್ಕಾರವು, ಕರಡು ಶಾಸನಗಳನ್ನು ಸ್ವೀಕರಿಸಿದ ಮೇಲೆ, ಅವುಗಳನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳುಗಳೊಳಗೆ ತನ್ನ ಟೀಕೆ ಟಿಪ್ಪಣಿಗಳು ಮತ್ತು ನಿರ್ದಿಷ್ಟ ಶಿಫಾರಸ್ಸುಗಳೊಡನೆ, ಅಂಥ ಕರಡು ಶಾಸನಗಳನ್ನು ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು ಮತ್ತು ಕುಲಾಧಿಪತಿಯವರು, ರಾಜ್ಯ ಸರ್ಕಾರದಿಂದ ಕರಡು ಶಾಸನಗಳನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ತಿಂಗಳೊಳಗೆ ತನ್ನ ಅನುಮೋದನೆಯನ್ನು ನೀಡಬಹುದು ಅಥವಾ ಅದಕ್ಕೆ ತನ್ನ ಅನುಮೋದನೆಯನ್ನು ತಡೆಹಿಡಿಯಬಹುದು ಅಥವಾ ಅದನ್ನು ಮತ್ತಷ್ಟು ಪರಿಗಣನೆಗಾಗಿ ಪ್ರಶಾಸನ ಸಭೆಗೆ ಕಳುಹಿಸಬಹುದು.

(9) ಪ್ರಶಾಸನ ಸಭೆಯು ಅಂಗೀಕರಿಸಿದ ಶಾಸನಗಳನ್ನು ಕುಲಾಧಿಪತಿಯವರು ಅನುಮೋದಿಸುವವರೆಗೆ ಜಾರಿಗೊಳಿಸತಕ್ಕದ್ದಲ್ಲ.

**48. ಪರ್ಯಾದೇಶಗಳು.–**(1) ಈ ಅಧಿನಿಯಮದ ಮತ್ತು ಶಾಸನಗಳ ಉಪಬಂಧಗಳಿಗೆ ಒಳಪಟ್ಟು ಪರ್ಯಾದೇಶಗಳು ಈ ಮುಂದಿನ ಎಲ್ಲಾ ವಿಷಯಗಳಿಗೆ ಅಥವಾ ಅವುಗಳಲ್ಲಿ ಯಾವುದಕ್ಕಾದರೂ ಉಪಬಂಧ ಕಲ್ಪಿಸಬಹುದು, ಎಂದರೆ:–

(ಎ) ವಿದ್ಯಾರ್ಥಿಗಳಿಗೆ, ವಿಶ್ವವಿದ್ಯಾಲಯಕ್ಕೆ ಮತ್ತು ಅದರ ಸಂಯೋಜಿತ ಕಾಲೇಜುಗಳಿಗೆ ಪ್ರವೇಶ ನೀಡುವುದು ಮತ್ತು ವಿಶ್ವವಿದ್ಯಾಲಯ ಮತ್ತು ಕಾಲೇಜುಗಳಿಗೆ ಪ್ರವೇಶಕ್ಕಾಗಿ ಶುಲ್ಕ ವಿಧಿಸುವುದು;

(ಬಿ) ವಿಶ್ವವಿದ್ಯಾಲಯದ ಪದವಿಗಳು, ಡಿಪ್ಲೊಮಾಗಳು ಮತ್ತು ಇತರ ವಿದ್ಯಾ ಪ್ರಶಸ್ತಿಗಳನ್ನು ಪಡೆಯುವುದಕ್ಕಾಗಿ ವ್ಯಾಸಂಗ ಕ್ರಮಗಳು;

(ಸಿ) ವಿಶ್ವವಿದ್ಯಾಲಯದ ಪದವಿಗಳು, ಡಿಪ್ಲೊಮಾಗಳು ಮತ್ತು ಇತರ ವಿದ್ಯಾ ಪ್ರಶಸ್ತಿಗಳನ್ನು ಪಡೆಯಲು ವಿದ್ಯಾರ್ಥಿಗಳಿಗೆ ವ್ಯಾಸಂಗ ಕ್ರಮಕ್ಕೆ ಪ್ರವೇಶ ನೀಡುವ ಬಗೆಗಿನ ಷರತ್ತುಗಳು;

(ಡಿ) ವಿಶ್ವವಿದ್ಯಾಲಯದ ಪರೀಕ್ಷೆಗಳನ್ನು ನಡೆಸುವುದು ಮತ್ತು ವಿದ್ಯಾರ್ಥಿಗಳಿಗೆ ಅಂಥ ಪರೀಕ್ಷೆಗಳಿಗೆ ಪ್ರವೇಶ ನೀಡುವ ಬಗೆಗಿನ ಷರತ್ತುಗಳು;

(ಇ) ಪರೀಕ್ಷೆಗಳಿಗೆ ವಿದ್ಯಾರ್ಥಿಗಳು ಹಾಜರಾಗುವುದಕ್ಕೆ ಸಂಬಂಧಿಸಿದಂತೆ ವಿನಾಯಿತಿಯನ್ನು ನೀಡಬಹುದಾದಂಥ ರೀತಿ;

(ಎಫ್) ಪರೀಕ್ಷೆ ನಡೆಸುವ ನಿಕಾಯಗಳು ಮತ್ತು ಪರೀಕ್ಷಕರಿಗಾಗಿ ನೇಮಕಾತಿ ಷರತ್ತುಗಳು ಮತ್ತು ನೇಮಕಾತಿ ರೀತಿ ಹಾಗೂ ಅವರ ಕರ್ತವ್ಯಗಳು;

(ಜಿ) ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಲ್ಲಿ ಶಿಸ್ತು ನಿರ್ವಹಣೆ;

(ಎಚ್) ವ್ಯಾಸಂಗ ಕ್ರಮಗಳು, ಸಂಶೋಧನೆ, ಪ್ರಯೋಗ ಮತ್ತು ಪ್ರಾಯೋಗಿಕ ತರಬೇತಿಗಾಗಿ ಹಾಗೂ ವಿಶ್ವವಿದ್ಯಾಲಯದ ಪದವಿಗಳ, ಡಿಪ್ಲೋಮಾಗಳ ಮತ್ತು ಇತರ ವಿದ್ಯಾ ಪ್ರಶಸ್ತಿಗಳ ಪರೀಕ್ಷೆಗಳಿಗೆ ಪ್ರವೇಶಾವಕಾಶಕ್ಕಾಗಿ ವಿಧಿಸಬೇಕಾದ ಫೀಜುಗಳು;

(ಐ) ಈ ಅಧಿನಿಯಮ ಅಥವಾ ಶಾಸನಗಳ ಪ್ರಕಾರ ಪರ್ಯಾದೇಶಗಳ ಮೂಲಕ ಉಪಬಂಧ ಕಲ್ಪಿಸಬೇಕಾದ ಅಥವಾ ಕಲ್ಪಿಸಬಹುದಾದ ಯಾವುದೇ ಇತರ ವಿಷಯ;

(2) ಪ್ರಶಿಕ್ಷಣ ಪರಿಷತ್ತು ಪ್ರಸ್ತಾಪಿಸಿದ ಯಾವುವೇ ಪರ್ಯಾದೇಶಗಳ ಕರಡನ್ನು ತಿದ್ದುಪಡಿ ಮಾಡಲು ಪ್ರಶಾಸನ ಸಭೆಗೆ ಅಧಿಕಾರವಿರತಕ್ಕದ್ದಲ್ಲ, ಆದರೆ, ಅದು ಪ್ರಸ್ತಾವವನ್ನು ತಿರಸ್ಕರಿಸಬಹುದು ಅಥವಾ ಪ್ರಶಾಸನ ಸಭೆಯು ಸೂಚಿಸಬಹುದಾದಂಥ ತಿದ್ದುಪಡಿಗಳೊಂದಿಗೆ, ಸಂಪೂರ್ಣವಾಗಿ ಅಥವಾ ಭಾಗಶಃ ಮರುಪರಿಶೀಲನೆಗಾಗಿ ಕರಡನ್ನು ಪ್ರಶಿಕ್ಷಣ ಪರಿಷತ್ತಿಗೆ ಹಿಂದಿರುಗಿಸಬಹುದು.

(3) ಪ್ರಶಾಸನ ಸಭೆಯು ರಚಿಸಿದ ಎಲ್ಲ ಪರ್ಯಾದೇಶಗಳು, ಅದು ನಿರ್ದೇಶಿಸಬಹುದಾದಂಥ ದಿನಾಂಕದಿಂದ ಜಾರಿಯಲ್ಲಿ ಬರತಕ್ಕದ್ದು. ಪ್ರತಿಯೊಂದು ಪರ್ಯಾದೇಶವನ್ನು ಕುಲಾಧಿಪತಿಯವರ ಪೂರ್ವಾನುಮೋದನೆಯೊಡನೆ ರಚಿಸತಕ್ಕದ್ದು:

ಪರಂತು, ರಾಜ್ಯ ಸಂಚಿತನಿಧಿಯಿಂದ ವೆಚ್ಚವನ್ನು ಪ್ರಸ್ತಾವಿಸುವ ಪರ್ಯಾದೇಶಗಳ ಸಂಬಂಧದಲ್ಲಿ, ಕುಲಾಧಿಪತಿಯವರು ತಮ್ಮ ಅನುಮೋದನೆಯನ್ನು ನೀಡುವ ಮೊದಲು ರಾಜ್ಯಸರ್ಕಾರದೊಡನೆ ಸಮಾಲೋಚಿಸತಕ್ಕದ್ದು.

(4) ಪ್ರಶಿಕ್ಷಣ ಪರಿಷತ್ತು ಪ್ರಸ್ತಾವಿಸಿದ ಒಂದು ಪರ್ಯಾದೇಶದ ಕರಡನ್ನು ಪ್ರಶಾಸನ ಸಭೆಯು ತಿರಸ್ಕರಿಸಿದಲ್ಲಿ, ಪ್ರಶಿಕ್ಷಣ ಪರಿಷತ್ತು, ಕುಲಾಧಿಪತಿಯವರಿಗೆ ಮೇಲ್ಮನವಿ ಮಾಡಿಕೊಳ್ಳಬಹುದು.

(5) ಕುಲಾಧಿಪತಿಯವರು, ಪ್ರಶಾಸನ ಸಭೆಯ ಟೀಕೆಟಿಪ್ಪಣಿಗಳನ್ನು ಪಡೆದ ತರುವಾಯ ಮೇಲ್ಮನವಿಯನ್ನು ತಿರಸ್ಕರಿಸಬಹುದು ಇಲ್ಲವೇ ಪ್ರಶಿಕ್ಷಣ ಪರಿಷತ್ತು ಪ್ರಸ್ತಾವಿಸಿದಂತೆ ಪರ್ಯಾದೇಶವನ್ನು ಅನುಮೋದಿಸಬಹುದು. ಅನಂತರ ಪರ್ಯಾದೇಶವನ್ನು ಪ್ರಶಾಸನ ಸಭೆಯು ರಚಿಸಿದ್ದರೆ ಹೇಗೋ ಹಾಗೆ ಅದು ಪರಿಣಾಮಕಾರಿಯಾಗಿರತಕ್ಕದ್ದು.

**49. ವಿನಿಯಮಗಳು.–** (1) ಪ್ರಶಿಕ್ಷಣ ಪರಿಷತ್ತು 34ನೇ ಪ್ರಕರಣದಲ್ಲಿ ನಮೂದಿಸಲಾದ ಎಲ್ಲಾ ಅಥವಾ ಯಾವುವೇ ಅಧಿಕಾರಗಳನ್ನು ಚಲಾಯಿಸಲು ಉಪಬಂಧಿಸುವುದಕ್ಕಾಗಿ ಮತ್ತು ವಿಶೇಷವಾಗಿ ಈ ಮುಂದಿನ ವಿಷಯಗಳ ಬಗ್ಗೆ ಉಪಬಂಧ ಕಲ್ಪಿಸುವುದಕ್ಕಾಗಿ ಈ ಅಧಿನಿಯಮ, ಶಾಸನಗಳು ಮತ್ತು ಪರ್ಯಾದೇಶಗಳಿಗೆ ಸುಸಂಗತವಾಗಿರುವ ವಿನಿಯಮಗಳನ್ನು ರಚಿಸಬಹುದು, ಎಂದರೆ:–

(ಎ) ವಿಶ್ವವಿದ್ಯಾಲಯಕ್ಕೆ ವಿದ್ಯಾರ್ಥಿಗಳ ಪ್ರವೇಶ;

(ಬಿ) ಇತರ ವಿಶ್ವವಿದ್ಯಾಲಯಗಳ ಪರೀಕ್ಷೆಗಳು ಮತ್ತು ಪದವಿಗಳನ್ನು, ವಿಶ್ವವಿದ್ಯಾಲಯದ ಪರೀಕ್ಷೆ ಮತ್ತು ಪದವಿಗಳಿಗೆ ಸಮನಾದುವೆಂದು ಮನ್ನಣೆ ನೀಡುವುದು;

(ಸಿ) ವಿಶ್ವವಿದ್ಯಾಲಯದ ವ್ಯಾಸಂಗ ಕ್ರಮಗಳು ಮತ್ತು ಪರೀಕ್ಷೆಗಳು ಮತ್ತು ವಿಶ್ವವಿದ್ಯಾಲಯದ ಅಥವಾ ಸಂಯೋಜನೆಗೊಂಡ ಕಾಲೇಜುಗಳ ಅಥವಾ ವಿಶ್ವವಿದ್ಯಾಲಯದ ಇತರ ಸಂಸ್ಥೆಗಳ ವಿದ್ಯಾರ್ಥಿಗಳನ್ನು ಯಾವ ಷರತ್ತುಗಳ ಮೇಲೆ ವಿಶ್ವವಿದ್ಯಾಲಯದ ಪರೀಕ್ಷೆಗಳು ಅಥವಾ ಪದವಿಗಳು, ಡಿಪ್ಲೊಮೋಗಳು ಮತ್ತು ಇತರ ಪ್ರಮಾಣ ಪತ್ರಗಳಿಗೆ ಸೇರಿಸಿಕೊಳ್ಳತಕ್ಕದ್ದೋ ಆ ಷರತ್ತುಗಳು;

(ಡಿ) ವಿನಾಯಿತಿಗಳನ್ನು ನೀಡುವುದು.

(2) ಪ್ರಶಿಕ್ಷಣ ಪರಿಷತ್ತು ಅಂಗೀಕರಿಸಿದ ಎಲ್ಲ ವಿನಿಯಮಗಳನ್ನು ಕುಲಾಧಿಪತಿಯವರ ಅನುಮೋದನೆಗಾಗಿ ಸಲ್ಲಿಸಲು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು. ರಾಜ್ಯ ಸರ್ಕಾರವು, ವಿಶ್ವವಿದ್ಯಾಲಯದಿಂದ ಸ್ವೀಕರಿಸಿದ ವಿನಿಯಮಗಳನ್ನು ಅವುಗಳನ್ನು ಸ್ವೀಕರಿಸಿದ ದಿನದಿಂದ ಎರಡು ತಿಂಗಳೊಳಗೆ ತನ್ನ ಟೀಕೆ ಟಿಪ್ಪಣಿಗಳೊಡನೆ ಕುಲಾಧಿಪತಿಯವರಿಗೆ ಕಳುಹಿಸತಕ್ಕದ್ದು. ಕುಲಾಧಿಪತಿಯವರು, ರಾಜ್ಯ ಸರ್ಕಾರದಿಂದ ಈ ವಿನಿಯಮಗಳನ್ನು ಸ್ವೀಕರಿಸಿದ ದಿನದಿಂದ ಒಂದು ತಿಂಗಳೊಳಗೆ ಅವುಗಳನ್ನು ಅನುಮೋದಿಸಬಹುದು ಅಥವಾ ಮತ್ತಷ್ಟು ಪರಿಶೀಲನೆಗಾಗಿ ಅವುಗಳನ್ನು ಪ್ರಶಿಕ್ಷಣ ಪರಿಷತ್ತಿಗೆ ಹಿಂದಿರುಗಿಸಬಹುದು.

(3) ಎಲ್ಲ ವಿನಿಯಮಗಳು, ಕುಲಾಧಿಪತಿಯವರು ಅವುಗಳನ್ನು ಅನುಮೋದಿಸಿದ ದಿನಾಂಕದಿಂದ ಅಥವಾ ಕುಲಾಧಿಪತಿಯವರು ನಿರ್ದೇಶಿಸಬಹುದಾದಂಥ ಇತರ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

## ಅಧ್ಯಾಯ VI

## ಹಣಕಾಸು ಮತ್ತು ಲೆಕ್ಕಪತ್ರಗಳು

**50. ಸಾಮಾನ್ಯ ನಿಧಿಗಳು.–** ವಿಶ್ವವಿದ್ಯಾಲಯವು ಒಂದು ಸಾಮಾನ್ಯ ನಿಧಿಯನ್ನು ಹೊಂದಿರತಕ್ಕದ್ದು ಮತ್ತು ಇದಕ್ಕೆ,:–

(ಎ) ಶುಲ್ಕಗಳಿಂದ ತನಗೆ ಬಂದ ವರಮಾನವನ್ನು, ದತ್ತಿಗಳು ಮತ್ತು ಅನುದಾನಗಳೇನಾದರೂ ಇದ್ದಲ್ಲಿ ಅವನ್ನು;

(ಬಿ) ವಿಧಿಸಬಹುದಾದಂಥ ಷರತ್ತುಗಳ ಮೇಲೆ ಸರ್ಕಾರವು ನೀಡಿದ ವಂತಿಗೆಗಳನ್ನು ಅಥವಾ ಅನುದಾನಗಳನ್ನು;

(ಸಿ) ಕೇಂದ್ರ ಸರ್ಕಾರ, ವಿಶ್ವವಿದ್ಯಾಲಯ ಅನುದಾನ ಆಯೋಗ, ವಿಶ್ವ ಆರೋಗ್ಯ ಸಂಸ್ಥೆ, ಯೂನಿಸೆಫ್, ಮುಂತಾದ ಅಂತಾರಾಷ್ಟ್ರೀಯ ದಾನಿ ಏಜೆನ್ಸಿಗಳಿಂದ ಪಡೆದುಕೊಂಡ ಅನುದಾನಗಳನ್ನು,

–ಜಮೆ ಮಾಡತಕ್ಕದ್ದು.

**51. ಇತರ ನಿಧಿಗಳು.–** ವಿಶ್ವವಿದ್ಯಾಲಯವು, ಶಾಸನಗಳ ಮೂಲಕ ನಿಯಮಿಸಬಹುದಾದಂಥ ಇತರ ನಿಧಿಗಳನ್ನು ಹೊಂದಿರಬಹುದು.

**52. ಸಾಲ ಪಡೆದುಕೊಳ್ಳುವ ಅಧಿಕಾರ.–** ವಿಶ್ವವಿದ್ಯಾಲಯವು, ಶಾಸನಗಳ ಮೂಲಕ ನಿಯಮಿಸಬಹುದಾದ ಯಾವುವೇ ಉದ್ದೇಶಗಳಿಗಾಗಿ, ಒಂದು ಬ್ಯಾಂಕು ಅಥವಾ ನಿಗಮದಿಂದ ಹಣವನ್ನು ಸಾಲ ಪಡೆದುಕೊಳ್ಳಬಹುದು. ಸಾಲ ಪಡೆದುಕೊಂಡ ಹಣದ ಒಟ್ಟು ಮೊಬಲಗು ಐದು ಲಕ್ಷ ರೂಪಾಯಿಗಳನ್ನು ಮೀರುವಲ್ಲಿ, ಅಂಥ ಸಾಲಕ್ಕೆ ಸರ್ಕಾರದ ಪೂರ್ವ ಮಂಜೂರಾತಿಯನ್ನು ಪಡೆದುಕೊಳ್ಳತಕ್ಕದ್ದು.

**53. ನಿಧಿಗಳ ನಿರ್ವಹಣೆ.–** ವಿಶ್ವವಿದ್ಯಾಲಯದ ಎಲ್ಲ ನಿಧಿಗಳನ್ನು ಶಾಸನಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ನಿರ್ವಹಿಸತಕ್ಕದ್ದು.

**54. ಲೆಕ್ಕ ಪರಿಶೋಧನೆಗೆ ನಿರ್ದೇಶಿಸಲು ಸರ್ಕಾರದ ಅಧಿಕಾರ.–** ಸರ್ಕಾರವು ಅವಶ್ಯಕವೆಂದು ಭಾವಿಸಿದಾಗಲೆಲ್ಲಾ ತಾನು ನಿರ್ದೇಶಿಸಬಹುದಾದಂಥ ಲೆಕ್ಕ ಪರಿಶೋಧಕರಿಂದ ವಿಶ್ವವಿದ್ಯಾಲಯದ ಲೆಕ್ಕಪತ್ರಗಳ ಲೆಕ್ಕಪರಿಶೋಧನೆ ನಡೆಸುವಂತೆ ಆದೇಶಿಸುವ ಅಧಿಕಾರವನ್ನು ಹೊಂದಿರತಕ್ಕದ್ದು.

**55. ಹಣಕಾಸಿನ ಅಂದಾಜುಗಳು.–** (1) ಕುಲಪತಿಯವರು, ನಿಯಮಿಸಬಹುದಾದಂಥ ದಿನಾಂಕದಂದು ಅಥವಾ ಅದಕ್ಕಿಂತ ಮೊದಲು, ಮುಂಬರುವ ವರ್ಷಕ್ಕಾಗಿ ವಿಶ್ವವಿದ್ಯಾಲಯದ ಹಣಕಾಸು ಅಂದಾಜುಗಳನ್ನು ಸಿದ್ಧಪಡಿಸುವಂತೆ ಮತ್ತು ಅದನ್ನು ಅನುಮೋದನೆಗಾಗಿ ಪ್ರಶಾಸನ ಸಭೆಯ ಮುಂದೆ ಇಡುವಂತೆ ಮಾಡತಕ್ಕದ್ದು.

(2) ಪ್ರಶಾಸನ ಸಭೆಯು ತಾನು ಸೂಕ್ತವೆಂದು ಭಾವಿಸುವಂಥ ಮಾರ್ಪಾಟುಗಳನ್ನು ಮಾಡಿ ಹಣಕಾಸು ಅಂದಾಜುಗಳನ್ನು ಅನುಮೋದಿಸಬಹುದು ಮತ್ತು ಪ್ರಶಾಸನ ಸಭೆ ಅನುಮೋದಿಸಿದ ಹಣಕಾಸು ಅಂದಾಜುಗಳಿಗನುಸಾರವಾಗಿ ಹೊರತು ಯಾವ ವೆಚ್ಚವನ್ನೂ ಮಾಡತಕ್ಕದ್ದಲ್ಲ.

**56. ವಾರ್ಷಿಕ ಲೆಕ್ಕಪತ್ರಗಳು ಮತ್ತು ಲೆಕ್ಕ ಪರಿಶೋಧನೆ.–** (1) ಹಣಕಾಸು ಅಧಿಕಾರಿಯು, ಕುಲಪತಿಯವರ ನಿರ್ದೇಶನದ ಅಡಿಯಲ್ಲಿ ವಿಶ್ವವಿದ್ಯಾಲಯದ ವಾರ್ಷಿಕ ಲೆಕ್ಕ-ಪತ್ರಗಳನ್ನು ಸಿದ್ಧಪಡಿಸತಕ್ಕದ್ದು ಮತ್ತು ಸರ್ಕಾರಕ್ಕೆ ಅದರ ಒಂದು ಪ್ರತಿಯನ್ನು ಕಳುಹಿಸತಕ್ಕದ್ದು.

(2) ಹದಿನೈದು ತಿಂಗಳುಗಳಿಗೆ ಕಡಿಮೆ ಇಲ್ಲದಂತಹ ಅಂತರಗಳಲ್ಲಿ ಕಡೆಯ ಪಕ್ಷ ವರ್ಷಕ್ಕೊಮ್ಮೆಯಾದರೂ, ರಾಜ್ಯ ಲೆಕ್ಕಪತ್ರಗಳ ನಿಯಂತ್ರಣಾಧಿಕಾರಿಯವರಿಂದ ವಿಶ್ವವಿದ್ಯಾಲಯದ ಲೆಕ್ಕಪತ್ರಗಳ ಲೆಕ್ಕಪರಿಶೋಧನೆಯನ್ನು ನಡೆಸತಕ್ಕದ್ದು.

(3) ವಿಶ್ವವಿದ್ಯಾಲಯದ ಲೆಕ್ಕಪರಿಶೋಧಿತ ಲೆಕ್ಕಪತ್ರಗಳನ್ನು ಹಾಗೂ ಲೆಕ್ಕಪರಿಶೋಧಕರ ವರದಿಯನ್ನು, ಪ್ರಶಾಸನ ಸಭೆಯು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು ಮತ್ತು ಅದರ ಪ್ರತಿಗಳನ್ನು ರಾಜ್ಯವಿಧಾನ ಮಂಡಲದ ಮುಂದೆ ಮಂಡಿಸತಕ್ಕದ್ದು.

(4) ಪ್ರಶಿಕ್ಷಣ ಪರಿಷತ್ತು ತನ್ನ ವಾರ್ಷಿಕ ಸಭೆಯಲ್ಲಿ ವಾರ್ಷಿಕ ಲೆಕ್ಕಪತ್ರಗಳನ್ನು ಪರಿಶೀಲಿಸತಕ್ಕದ್ದು. ಪ್ರಶಿಕ್ಷಣ ಪರಿಷತ್ತು ಇದಕ್ಕೆ ಸಂಬಂಧ ಪಟ್ಟಂತೆ ನಿರ್ಣಯಗಳನ್ನು ಹೊರಡಿಸಬಹುದು ಮತ್ತು ಅದನ್ನು ಪ್ರಶಾಸನ ಸಭೆಗೆ ತಿಳಿಸಬಹುದು. ಪ್ರಶಿಕ್ಷಣ ಪರಿಷತ್ತು ಮಾಡಿದ ಸಲಹೆಗಳನ್ನು ಪ್ರಶಾಸನ ಸಭೆಯು ಪರಿಶೀಲನೆಗೆ ತೆಗೆದುಕೊಳ್ಳತಕ್ಕದ್ದು ಮತ್ತು ತಾನು ಸೂಕ್ತವೆಂದು ಆಲೋಚಿಸಬಹುದಾದ ಕ್ರಮಗಳನ್ನು ಅದರ ಮೇಲೆ ತೆಗೆದುಕೊಳ್ಳತಕ್ಕದ್ದು. ಪ್ರಶಾಸನ ಸಭೆಯು ತಾನು ತೆಗೆದುಕೊಂಡ ಕ್ರಮಗಳ ಬಗ್ಗೆ ಅಥವಾ ಕ್ರಮಕೈಗೊಳ್ಳದಿರುವ ಬಗ್ಗೆ ಕಾರಣಗಳನ್ನು ತನ್ನ ಮುಂದಿನ ಸಭೆಯಲ್ಲಿ ಪ್ರಶಿಕ್ಷಣ ಪರಿಷತ್ತಿಗೆ ತಿಳಿಸತಕ್ಕದ್ದು.

**57. ವಾರ್ಷಿಕ ವರದಿ.-** (1) ಪ್ರಶಾಸನ ಸಭೆಯು ಪ್ರತಿಯೊಂದು ಹಣಕಾಸು ವರ್ಷಕ್ಕೆ, ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ವಿವರಗಳನ್ನು ಒಳಗೊಂಡ ವಾರ್ಷಿಕ ವರದಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಶಾಸನಗಳ ಮೂಲಕ ನಿಯಮಿಸಬಹುದಾದಂಥ ದಿನಾಂಕಗಳಂದು ಅಥವಾ ಅದಕ್ಕೆ ಮೊದಲು ಪ್ರಶಿಕ್ಷಣ ಪರಿಷತ್ತಿಗೆ ಸಲ್ಲಿಸತಕ್ಕದ್ದು. ಪ್ರಶಿಕ್ಷಣ ಪರಿಷತ್ತು ಅವುಗಳ ಮೇಲೆ ನಿರ್ಣಯಗಳನ್ನು ಹೊರಡಿಸಬಹುದು ಮತ್ತು ಪ್ರಶಾಸನ ಸಭೆಯು ಅದಕ್ಕನುಸಾರವಾಗಿ ಕ್ರಮಕೈಗೊಳ್ಳತಕ್ಕದ್ದು. ಕೈಗೊಳ್ಳಲಾದ ಕ್ರಮವನ್ನು ಪ್ರಶಿಕ್ಷಣ ಪರಿಷತ್ತಿಗೆ ತಿಳಿಸತಕ್ಕದ್ದು.

(2) ವಾರ್ಷಿಕ ವರದಿಯ ಪ್ರತಿಗಳನ್ನು ಹಾಗೂ ಅವುಗಳ ಮೇಲಿನ ಪ್ರಶಾಸನ ಸಭೆಯ ನಿರ್ಣಯಗಳನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಅವುಗಳನ್ನು ಮಂಡಿಸತಕ್ಕದ್ದು.

## ಅಧ್ಯಾಯ VII

## ಕಾಲೇಜುಗಳ ಸಂಯೋಜನೆ ಮತ್ತು ಸಂಸ್ಥೆಗಳಿಗೆ ಮಾನ್ಯತೆ ನೀಡುವುದು

**58. ಕಾಲೇಜುಗಳ ಸಂಯೋಜನೆ.-** (1) ವಿಶ್ವವಿದ್ಯಾಲಯದ ಪ್ರದೇಶದೊಳಗೆ ಬರುವ ಕಾಲೇಜುಗಳನ್ನು, ಈ ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಷರತ್ತುಗಳನ್ನು ಪೂರೈಸಿದ ಮೇಲೆ, ರಾಜ್ಯ ಸರ್ಕಾರವು ಮಾಡಿದ ಶಿಫಾರಸುಗಳ ಮೇಲೆ ವಿಶ್ವವಿದ್ಯಾಲಯಕ್ಕೆ ಸಂಯೋಜಿತವಾದ ಕಾಲೇಜುಗಳೆಂಬುದಾಗಿ ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಳಿಸಬಹುದು.

(2) ವಿಶ್ವವಿದ್ಯಾಲಯಕ್ಕೆ ಸಂಯೋಜನೆಗಾಗಿ ಅರ್ಜಿಯನ್ನು ಸಲ್ಲಿಸುವ ಕಾಲೇಜು, ಪರ್ಯಾದೇಶಗಳ ಮೂಲಕ ನಿಗದಿಪಡಿಸಲಾದ ಕಾಲಮಿತಿಯೊಳಗೆ ಕುಲಸಚಿವರಿಗೆ ಅರ್ಜಿಯನ್ನು ಕಳಿಸತಕ್ಕದ್ದು ಮತ್ತು ಪ್ರಶಾಸನ ಸಭೆಗೆ ಮತ್ತು ಪ್ರಶಿಕ್ಷಣ ಪರಿಷತ್ತಿಗೆ,-

(ಎ) ಆ ಕಾಲೇಜು ನೀಡಲು ಉದ್ದೇಶಿಸಿದ ಶಿಕ್ಷಣದ ಮಾದರಿಯನ್ನು, ನೆರೆಹೊರೆಯಲ್ಲಿ ಈಗಿರುವ ಏರ್ಪಾಟು ಮತ್ತು ಕಾಲೇಜನ್ನು ಯಾವ ಸ್ಥಳದಲ್ಲಿ ಸ್ಥಾಪಿಸಬೇಕಾಗಿದೆಯೋ ಆ ಸ್ಥಳದ ಸೂಕ್ತತೆಯನ್ನು ಗಮನದಲ್ಲಿಟ್ಟುಕೊಂಡು, ಆ ಕಾಲೇಜು ಸ್ಥಳೀಯ ಅವಶ್ಯಕತೆಯನ್ನು ಪೂರೈಸುತ್ತದೆಯೆಂದು;

(ಬಿ) ಅದು ಕ್ರಮಬದ್ಧವಾಗಿ ರಚಿಸಲಾದ ಆಡಳಿತ ಮಂಡಳಿಯ ನಿರ್ವಹಣೆಗೆ ಒಳಪಟ್ಟಿರುತ್ತದೆಂದು;

(ಸಿ) ಬೋಧನಾ ಸಿಬ್ಬಂದಿಯ ಸಂಖ್ಯೆ ಹಾಗೂ ವಿದ್ಯಾರ್ಹತೆಗಳು ಮತ್ತು ಅವರ ಪದಾವಧಿಯನ್ನು ನಿಯಂತ್ರಿಸುವ ಷರತ್ತುಗಳು, ಆ ಕಾಲೇಜಿನಲ್ಲಿ ಕೈಗೊಳ್ಳಬೇಕಾದ ಶಿಕ್ಷಣ ವ್ಯಾಸಂಗ ಕ್ರಮಗಳು, ಬೋಧನೆ ಅಥವಾ ತರಬೇತಿಗೆ ಸೂಕ್ತ ಅವಕಾಶವನ್ನು ಕಲ್ಪಿಸುವಂತಿವೆಯೆಂದು;

(ಡಿ) ಯಾವ ಕಟ್ಟಡದಲ್ಲಿ ಆ ಕಾಲೇಜು ಇರಬೇಕಾಗಿದೆಯೋ ಆ ಕಟ್ಟಡವು ಸೂಕ್ತವಾಗಿದೆಯೆಂದು ಮತ್ತು ತಂದೆ-ತಾಯಿಗಳೊಂದಿಗೆ ಅಥವಾ ಪಾಲಕರೊಡನೆ ವಾಸಿಸದ ವಿದ್ಯಾರ್ಥಿಗಳಿಗೆ ಆ ಕಾಲೇಜಿನಲ್ಲಿ ಅಥವಾ ಆ ಕಾಲೇಜು ಅನುಮೋದಿಸುವ ವಸತಿ ಗೃಹದಲ್ಲಿ ನಿವಾಸಕ್ಕಾಗಿ ಮತ್ತು ವಿದ್ಯಾರ್ಥಿಗಳ ಮೇಲ್ವಿಚಾರಣೆ ಹಾಗೂ ಕಲ್ಯಾಣಕ್ಕಾಗಿ ಪರ್ಯಾದೇಶಗಳಿಗನುಗುಣವಾಗಿ ಏರ್ಪಾಟನ್ನು ಮಾಡಲಾಗುವುದೆಂದು;

(ಇ) ಗ್ರಂಥಾಲಯಕ್ಕಾಗಿ ಸೂಕ್ತ ವ್ಯವಸ್ಥೆ ಮಾಡಲಾಗಿದೆ ಅಥವಾ ಮಾಡಲಾಗುವುದೆಂದು;

(ಎಫ್) ಪ್ರಾಚಾರ್ಯರು ಮತ್ತು ಬೋಧಕ ಸಿಬ್ಬಂದಿ ಸದಸ್ಯರ ನಿವಾಸಕ್ಕಾಗಿ ಕಾಲೇಜಿನಲ್ಲಿ ಅಥವಾ ವಿದ್ಯಾರ್ಥಿಗಳ ನಿವಾಸಕ್ಕಾಗಿ ಒದಗಿಸಲಾದ ಸ್ಥಳದಲ್ಲಿ ಅಥವಾ ಅದರ ಹತ್ತಿರ, ಸನ್ನಿವೇಶಗಳು ಅನುಮತಿಸುವಷ್ಟರಮಟ್ಟಿಗೆ ಸೂಕ್ತ ಏರ್ಪಾಟನ್ನು ಮಾಡಲಾಗುವುದೆಂದು;

(ಜಿ) ಆ ಕಾಲೇಜಿನ ಹಣಕಾಸಿನ ಸಂಪನ್ಮೂಲಗಳು, ಅದರ ನಿರಂತರ ನಿರ್ವಹಣೆ ಮತ್ತು ದಕ್ಷ ಕಾರ್ಯನಿರ್ವಹಣೆಗೆ ಸೂಕ್ತ ಏರ್ಪಾಟನ್ನು ಮಾಡಲು ತಕ್ಕಷ್ಟಿವೆಯೆಂದು; ಮತ್ತು

(ಎಚ್) ವಿದ್ಯಾರ್ಥಿಗಳು ಸಂದಾಯ ಮಾಡಬೇಕಾದ ಶುಲ್ಕಗಳೇನಾದರೂ ಇದ್ದಲ್ಲಿ, ಅವುಗಳನ್ನು ನಿಗದಿಪಡಿಸುವ ಪರ್ಯಾದೇಶಗಳನ್ನು ರೂಪಿಸಲಾಗಿದೆಯೆಂದು ಅಥವಾ ರೂಪಿಸಲಾಗುವುದೆಂದು,

- ಮನದಟ್ಟುಮಾಡಿಕೊಡತಕ್ಕದ್ದು.

(3) ಕಾಲೇಜು ಸಂಯೋಜನೆಗೊಂಡ ತರುವಾಯ, ಆಡಳಿತದ ಯಾವುದೇ ವರ್ಗಾವಣೆಯನ್ನು ಮತ್ತು ಬೋಧಕ ಸಿಬ್ಬಂದಿಯಲ್ಲಿನ ಎಲ್ಲ ಬದಲಾವಣೆಗಳನ್ನು ಮತ್ತು ಈ ಹಿಂದೆ ಹೇಳಿದ ಯಾವುವೇ ಅಗತ್ಯತೆಗಳನ್ನು ಪೂರೈಸದಂತೆ ಮಾಡುವ ಅಥವಾ ಪೂರೈಸಬೇಕಾಗಿಯೇ ಮುಂದುವರಿಯುವಂತೆ ಮಾಡುವ ಎಲ್ಲ ಇತರ ಬದಲಾವಣೆಗಳನ್ನು ಪ್ರಶಾಸನ ಸಭೆಗೆ ಮತ್ತು ಸರ್ಕಾರಕ್ಕೆ ಅಥವಾ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ಇತರ ಪ್ರಾಧಿಕಾರಕ್ಕೆ ಕೂಡಲೇ ವರದಿ ಮಾಡುವ ಭರವಸೆಯನ್ನೂ ಸಹ ಅರ್ಜಿಯು ಒಳಗೊಂಡಿರತಕ್ಕದ್ದು.

(4) (2)ನೇ ಉಪ-ಪ್ರಕರಣದಡಿ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಪ್ರಶಾಸನ ಸಭೆಯು,-

(ಎ) ಅವಶ್ಯಕ ಹಾಗೂ ಸುಸಂಗತವೆಂದು ಭಾವಿಸಬಹುದಾದಂಥ ವಿಷಯಗಳಿಗೆ ಸಂಬಂಧಿಸಿದಂತೆ ಈ ಬಗ್ಗೆ ಪ್ರಶಾಸನ ಸಭೆಯಿಂದ ಅಧಿಕೃತನಾದ ಸಕ್ಷಮ ವ್ಯಕ್ತಿ ಅಥವಾ ವ್ಯಕ್ತಿಗಳಿಂದ ಸ್ಥಳೀಯ ವಿಚಾರಣೆ ನಡೆಸಬೇಕೆಂದು ನಿರ್ದೇಶಿಸತಕ್ಕದ್ದು;

(ಬಿ) ತನಗೆ ಅವಶ್ಯಕವೆಂದು ಕಂಡುಬರಬಹುದಾದಂಥ ಹೆಚ್ಚಿನ ವಿಚಾರಣೆಯನ್ನು ಮಾಡತಕ್ಕದ್ದು; ಮತ್ತು

(ಸಿ) (ಎ) ಮತ್ತು (ಬಿ) ಖಂಡಗಳಡಿಯ ಯಾವುದೇ ವಿಚಾರಣೆಯ ಫಲಿತಾಂಶವನ್ನು ನಿರೂಪಿಸಿ, ಅರ್ಜಿಯನ್ನು ಸಂಪೂರ್ಣವಾಗಿ ಅಥವಾ ಭಾಗಶಃ ಮಂಜೂರು ಮಾಡಬೇಕೆ ಅಥವಾ ತಿರಸ್ಕರಿಸಬೇಕೆ ಎಂಬ ಪ್ರಶ್ನೆಯ ಮೇಲೆ ಪ್ರಶಿಕ್ಷಣ ಪರಿಷತ್ತಿನೊಡನೆ ಸಮಾಲೋಚಿಸಿದ ತರುವಾಯ ತನ್ನ ಅಭಿಪ್ರಾಯಗಳನ್ನು ದಾಖಲುಮಾಡತಕ್ಕದ್ದು.

(5) ಕುಲಸಚಿವರು, ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂಥ ಸಮಯದೊಳಗೆ ಅರ್ಜಿಯನ್ನು ಮತ್ತು ಅದಕ್ಕೆ ಸಂಬಂಧಿಸಿದ ಪ್ರಶಿಕ್ಷಣ ಪರಿಷತ್ತಿನ ಮತ್ತು ಪ್ರಶಾಸನ ಸಭೆಯ ವ್ಯವಹರಣೆಗಳೇನಾದರೂ ಇದ್ದಲ್ಲಿ, ಅವುಗಳೆಲ್ಲವನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ಸರ್ಕಾರವು ತನಗೆ ಅವಶ್ಯಕವೆಂದು ಕಂಡುಬರಬಹುದಾದಂಥ ವಿಚಾರಣೆಯನ್ನು ನಡೆಸಿದ ತರುವಾಯ, ಅರ್ಜಿಯನ್ನು ಅಥವಾ ಅದರ ಯಾವುದೇ ಭಾಗವನ್ನು ಮಂಜೂರು ಮಾಡುವುದಕ್ಕೆ ಶಿಫಾರಸು ಮಾಡತಕ್ಕದ್ದು ಅಥವಾ ಅರ್ಜಿಯನ್ನು ಅಥವಾ ಅದರ ಭಾಗವನ್ನು ತಿರಸ್ಕರಿಸತಕ್ಕದ್ದು ಮತ್ತು ವಿಶ್ವವಿದ್ಯಾಲಯವು ಅದಕ್ಕನುಸಾರವಾಗಿ ಆದೇಶಗಳನ್ನು ಹೊರಡಿಸತಕ್ಕದ್ದು.

(6) ಅರ್ಜಿಗೆ ಅಥವಾ ಅದರ ಯಾವುದೇ ಭಾಗಕ್ಕೆ ಮಂಜೂರಾತಿ ನೀಡಿರುವಲ್ಲಿ, ಯಾವ ಶಿಕ್ಷಣದ ವ್ಯಾಸಂಗ ಕ್ರಮಗಳ ಸಂಬಂಧದಲ್ಲಿ ಮತ್ತು ಯಾವ ಅವಧಿಗಾಗಿ ಕಾಲೇಜು ಸಂಯೋಜನೆಗೊಂಡಿದೆ ಎಂಬುದನ್ನು ವಿಶ್ವವಿದ್ಯಾಲಯದ ಆದೇಶವು ನಿರ್ದಿಷ್ಟಪಡಿಸತಕ್ಕದ್ದು ಮತ್ತು ಸರ್ಕಾರವು ಅಥವಾ ವಿಶ್ವವಿದ್ಯಾಲಯವು ಅರ್ಜಿಯನ್ನು ಅಥವಾ ಅದರ ಯಾವುದೇ ಭಾಗವನ್ನು ತಿರಸ್ಕರಿಸಿರುವಲ್ಲಿ, ವಿಶ್ವವಿದ್ಯಾಲಯದ ಆದೇಶವು ಆ ಬಗ್ಗೆ ಕಾರಣಗಳನ್ನು ತಿಳಿಸತಕ್ಕದ್ದು:

ಪರಂತು, ಐದು ವರ್ಷಗಳಿಗೆ ಕಡಿಮೆ ಇಲ್ಲದ ಅವಧಿಗೆ ನಿರಂತರವಾಗಿ ಸಂಯೋಜನೆಗೊಂಡಿರುವ ಮತ್ತು ಸಂಯೋಜನೆಯ ಎಲ್ಲ ಷರತ್ತುಗಳನ್ನು ಪೂರೈಸಿರುವ ಮತ್ತು ಕಾಲಕಾಲಕ್ಕೆ ವಿಶ್ವವಿದ್ಯಾಲಯವು ನಿಯಮಿಸಿದ ವಿದ್ಯಾವಿಷಯಕ ಮತ್ತು ಆಡಳಿತಾತ್ಮಕ ಗುಣಮಟ್ಟಗಳನ್ನು ಸಾಧಿಸಿರುವ ಕಾಲೇಜಿಗೆ ಸರ್ಕಾರದ ಶಿಫಾರಸಿನ ಮೇಲೆ ಖಾಯಂ ಸಂಯೋಜನೆಯನ್ನು ಮಂಜೂರು ಮಾಡಬಹುದು.

(7) ಸರ್ಕಾರವು ಅಥವಾ ವಿಶ್ವವಿದ್ಯಾಲಯವು ತನ್ನ ಆದೇಶವನ್ನು ಮಾಡಿದ ತರುವಾಯ ಸಾಧ್ಯವಾದಷ್ಟು ಬೇಗನೆ, ಕುಲಸಚಿವರು, ಅರ್ಜಿಯ ಬಗ್ಗೆ, (4) ಮತ್ತು (6) ನೇ ಉಪ-ಪ್ರಕರಣಗಳಡಿ ಅದರ ಮೇಲೆ ಕೈಗೊಂಡ ಕ್ರಮ ಮತ್ತು ಅದಕ್ಕೆ ಸಂಬಂಧಪಟ್ಟ ಎಲ್ಲ ವ್ಯವಹರಣೆಗಳ ಬಗ್ಗೆ ಸಂಪೂರ್ಣ ವರದಿಯನ್ನು ಪ್ರಶಿಕ್ಷಣ ಪರಿಷತ್ತಿಗೆ ಸಲ್ಲಿಸತಕ್ಕದ್ದು.

(8) (1)ನೇ ಉಪ-ಪ್ರಕರಣದಡಿಯ ಅರ್ಜಿಯನ್ನು (5)ನೇ ಉಪ-ಪ್ರಕರಣದಡಿ ಆದೇಶವನ್ನು ಮಾಡುವುದಕ್ಕೆ ಮೊದಲಿನ ಯಾವುದೇ ಸಮಯದಲ್ಲಿ ಹಿಂತೆಗೆದುಕೊಳ್ಳಬಹುದು.

(9) ಯಾವ ವ್ಯಾಸಂಗ ಕ್ರಮದ ಸಂಬಂಧದಲ್ಲಿ ಕಾಲೇಜು ಸಂಯೋಜನೆಗೊಂಡಿದೆಯೋ ಆ ವ್ಯಾಸಂಗ ಕ್ರಮಗಳಿಗೆ ಇನ್ನಷ್ಟು ವ್ಯಾಸಂಗ ಕ್ರಮಗಳನ್ನು ಸೇರಿಸಲು ಆ ಕಾಲೇಜು ಅಪೇಕ್ಷಿಸಿದಲ್ಲಿ, (2)ರಿಂದ (8)ನೇ ಉಪ-ಪ್ರಕರಣಗಳಲ್ಲಿ ನಿಯಮಿಸಲಾದ ಕಾರ್ಯ ವಿಧಾನಗಳನ್ನು ಸಾಧ್ಯವಾದಷ್ಟು ಮಟ್ಟಿಗೆ, ಅನುಸರಿಸತಕ್ಕದ್ದು.

(10)(ಎ) ವಿಶ್ವವಿದ್ಯಾಲಯಕ್ಕೆ ಸಂಯೋಜನೆಯನ್ನು ಕೋರುವ ಯಾವುದೇ ಹೊಸ ಕಾಲೇಜು ಅಥವಾ ಅಂಥ ವ್ಯಾಸಂಗ ಕ್ರಮಗಳಿಗೆ ಹೊಸ ವ್ಯಾಸಂಗ ಕ್ರಮಗಳನ್ನು ಸೇರಿಸಲು ಸಂಯೋಜನೆಯನ್ನು ಕೋರುವ ಈಗಾಗಲೇ ಅಸ್ತಿತ್ವದಲ್ಲಿರುವ ಕಾಲೇಜು, ಸಂದರ್ಭಾನುಸಾರವಾಗಿ ಅಂಥ ಹೊಸ ಕಾಲೇಜಿಗೆ ಅಥವಾ ಅಂಥ ವ್ಯಾಸಂಗ

ಕ್ರಮಕ್ಕೆ ಸಂಬಂಧಪಟ್ಟಂತೆ ಆಸ್ತಿತ್ವದಲ್ಲಿರುವ ಕಾಲೇಜಿಗೆ ಸಂಯೋಜನೆಯನ್ನು ಮಂಜೂರು ಮಾಡಿದ ಹೊರತು, ಆ ವ್ಯಾಸಂಗ ಕ್ರಮಕ್ಕೆ ವಿದ್ಯಾರ್ಥಿಗಳಿಗೆ ಪ್ರವೇಶ ನೀಡತಕ್ಕದ್ದಲ್ಲ;

(ಬಿ) ಒಂದು ವ್ಯಾಸಂಗ ಕ್ರಮಕ್ಕೆ ಸೇರಿಸಿಕೊಳ್ಳಬೇಕಾದ ವಿದ್ಯಾರ್ಥಿಗಳ ಗರಿಷ್ಠ ಸಂಖ್ಯೆಯು, ವಿಶ್ವವಿದ್ಯಾಲಯ ಅಥವಾ ಸರ್ಕಾರವು ಹಾಗೆ ಸೇರಿಸಿಕೊಳ್ಳಲು ನಿಗದಿಪಡಿಸಿದ ಸಂಖ್ಯೆಯನ್ನು ಮೀರತಕ್ಕದ್ದಲ್ಲ ಮತ್ತು ಸೇರಿಸಿಕೊಳ್ಳಬೇಕಾದ ಸಂಖ್ಯೆಗಿಂತ ಹೆಚ್ಚಿಗೆಯಾಗಿ ಮಾಡಿಕೊಂಡ ಯಾವುದೇ ಪ್ರವೇಶವು ಅನೂರ್ಜಿತವಾಗತಕ್ಕದ್ದು;

(ಸಿ) (ಬಿ) ಖಂಡದಡಿ ಯಾವ ವಿದ್ಯಾರ್ಥಿಯ ಪ್ರವೇಶವು ಅನೂರ್ಜಿತವಾಗಿದೆಯೋ ಆ ಯಾವೊಬ್ಬ ವಿದ್ಯಾರ್ಥಿಯು ವಿಶ್ವವಿದ್ಯಾಲಯವು ನಡೆಸುವ ಯಾವುದೇ ಪರೀಕ್ಷೆಗೆ ಹಾಜರಾಗಲು ಅರ್ಹನಾಗಿರತಕ್ಕದ್ದಲ್ಲ ಅಥವಾ ಆ ಕಾಲೇಜು ಅವನಿಗೆ ಪರೀಕ್ಷೆಗೆ ಹಾಜರಾಗಲು ಅನುಮತಿಸತಕ್ಕದ್ದಲ್ಲ.

**59. ಕೆಲವು ಸಂಸ್ಥೆಗಳಿಗೆ ಮಾನ್ಯತೆ.-** (1) ಸಂಶೋಧನೆ ಅಥವಾ ನಿರ್ದಿಷ್ಟಪಡಿಸಿದ ಅಧ್ಯಯನಗಳನ್ನು ನಡೆಸುವ ಕಾಲೇಜುಗಳನ್ನು ಹೊರತುಪಡಿಸಿ, ವಿಶ್ವವಿದ್ಯಾಲಯ ಪ್ರದೇಶದ ಒಳಗೆ ಅಥವಾ ಹೊರಗೆ ಇರುವ ಯಾವುದೇ ಸಂಸ್ಥೆಯನ್ನು, ಶಾಸನಗಳ ಮೂಲಕ ನಿಯಮಿಸಬಹುದಾದಂಥ ಉದ್ದೇಶಕ್ಕಾಗಿ ಮತ್ತು ಅಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು, ಮಾನ್ಯತೆ ಪಡೆದ ಸಂಸ್ಥೆಯೆಂದು ಪ್ರಶಾಸನ ಸಭೆಯು ಮಾನ್ಯತೆ ನೀಡಬಹುದು.

(2) ಯಾವುದೇ ಅಂಥ ಮಾನ್ಯತೆಯನ್ನು ಶಾಸನಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ಮತ್ತು ಅಂಥ ಕಾರಣಗಳಿಗಾಗಿ ಪೂರ್ಣವಾಗಿಯಾಗಲಿ ಅಥವಾ ಭಾಗಶಃವಾಗಿಯಾಗಲಿ ಹಿಂತೆಗೆದುಕೊಳ್ಳಬಹುದು ಅಥವಾ ಮಾರ್ಪಾಟು ಮಾಡಬಹುದು.

**60. ಕಾಲೇಜುಗಳ ಪರಿವೀಕ್ಷಣೆ ಮತ್ತು ವರದಿಗಳು.-** (1) ಸಂಯೋಜನೆಗೊಂಡ ಪ್ರತಿಯೊಂದು ಕಾಲೇಜು, ಪ್ರಶಾಸನ ಸಭೆಯು ಪ್ರಶಿಕ್ಷಣ ಪರಿಷತ್ತಿನೊಡನೆ ಸಮಾಲೋಚನೆ ನಡೆಸಿದ ತರುವಾಯ, ಆ ಕಾಲೇಜಿನ ಅಥವಾ ಸಂಸ್ಥೆಯ ದಕ್ಷತೆಯನ್ನು ನಿರ್ಣಯಿಸುವುದಕ್ಕೆ ಸಾಧ್ಯವಾಗುವಂತೆ ಅಗತ್ಯಪಡಿಸಬಹುದಾದಂಥ ವರದಿಗಳನ್ನು, ವಿವರಣ ಪಟ್ಟಿಕೆಗಳನ್ನು ಮತ್ತು ಇತರ ಮಾಹಿತಿಯನ್ನು ಕುಲಸಚಿವರಿಗೆ ಒದಗಿಸತಕ್ಕದ್ದು.

(2) ಪ್ರಶಾಸನ ಸಭೆಯು, ಅಂಥ ಪ್ರತಿಯೊಂದು ಕಾಲೇಜನ್ನು ಈ ಬಗ್ಗೆ ತನ್ನಿಂದ ಅಧಿಕೃತನಾದ ಒಬ್ಬ ಅಥವಾ ಹೆಚ್ಚು ಸಕ್ಷಮ ವ್ಯಕ್ತಿಗಳು ಕಾಲಕಾಲಕ್ಕೆ ಪರಿವೀಕ್ಷಣೆ ನಡೆಸುವಂತೆ ಮಾಡತಕ್ಕದ್ದು.

(3) ಪ್ರಶಾಸನ ಸಭೆಯು, ಹಾಗೆ ಪರಿವೀಕ್ಷಣೆ ನಡೆಸಿದ ಮೇಲೆ ಯಾವುದೇ ಕಾಲೇಜನ್ನು, ನಿರ್ದಿಷ್ಟಪಡಿಸಿದ ಅವಧಿಯೊಳಗೆ, 58ನೇ ಪ್ರಕರಣದ (2)ನೇ ಉಪ-ಪ್ರಕರಣದಲ್ಲಿ ಉಲ್ಲೇಖಿಸಲಾದ ಯಾವುವೇ ವಿಷಯಗಳ ಸಂಬಂಧದಲ್ಲಿ ತನಗೆ ಅವಶ್ಯಕವೆಂದು ಕಂಡುಬರಬಹುದಾದಂಥ ಕ್ರಮವನ್ನು ಕೈಗೊಳ್ಳಲು ಕೋರಬಹುದು.

(4) ಪ್ರತಿಯೊಂದು ಕಾಲೇಜು, ವಿಶ್ವವಿದ್ಯಾಲಯವು ವಿದ್ಯಾವಿಷಯಕ್ಕೆ ಮತ್ತು ಆಡಳಿತಕ್ಕೆ ಸಂಬಂಧಿಸಿದ ಎಲ್ಲಾ ವಿಷಯಗಳ ಬಗ್ಗೆ ಮತ್ತು ಅದಕ್ಕೆ ಪೂರಕವಾದ ವಿಷಯಗಳ ಬಗ್ಗೆ ಕಾಲಕಾಲಕ್ಕೆ ಹೊರಡಿಸುವ ನಿರ್ದೇಶನಗಳನ್ನು ಪಾಲಿಸತಕ್ಕದ್ದು.,

**61. ಸಂಯೋಜನೆಯನ್ನು ಹಿಂತೆಗೆದುಕೊಳ್ಳುವುದು.-** (1) 58ನೇ ಪ್ರಕರಣದ (2)ನೇ ಉಪ-ಪ್ರಕರಣದ ಯಾವುವೇ ಉಪಬಂಧಗಳನ್ನು ಪಾಲಿಸಲು ಸಂಯೋಜಿತ ಕಾಲೇಜು ತಪ್ಪಿದರೆ ಅಥವಾ ಆ ಕಾಲೇಜು ತನ್ನ ಸಂಯೋಜನೆಯ ಯಾವುವೇ ಷರತ್ತುಗಳನ್ನು ಪಾಲಿಸಲು ತಪ್ಪಿದರೆ ಅಥವಾ ಶಿಕ್ಷಣದ ಹಿತಾಸಕ್ತಿಗೆ ಬಾಧಕವಾಗುವ ರೀತಿಯಲ್ಲಿ ಕಾಲೇಜನ್ನು ನಡೆಸಿಕೊಂಡು ಬರುತ್ತಿದ್ದರೆ ಸಂಯೋಜನೆಯ ಮೂಲಕ ಕಾಲೇಜಿಗೆ ಪ್ರದತ್ತವಾದ ಹಕ್ಕುಗಳನ್ನು ಪೂರ್ಣವಾಗಿಯಾಗಲಿ ಅಥವಾ ಭಾಗಶಃವಾಗಿಯಾಗಲಿ ಹಿಂತೆಗೆದುಕೊಳ್ಳಬಹುದು ಅಥವಾ ಮಾರ್ಪಾಟು ಮಾಡಬಹುದು.

(2) ಅಂಥ ಹಕ್ಕುಗಳನ್ನು ಹಿಂತೆಗೆದುಕೊಳ್ಳುವುದಕ್ಕೆ ಅಥವಾ ಮಾರ್ಪಾಡು ಮಾಡುವುದಕ್ಕೆ ಪ್ರಸ್ತಾವ ಮಂಡನೆ ಯನ್ನು ಮೊದಲು ಪ್ರಶಾಸನ ಸಭೆಯಲ್ಲಿ ಮಾತ್ರವೇ ಮಾಡತಕ್ಕದ್ದು. ಅಂಥ ಪ್ರಸ್ತಾವವನ್ನು ಮಂಡಿಸಲು ಉದ್ದೇಶಿಸಿರುವ ಪ್ರಶಾಸನ ಸಭೆಯ ಸದಸ್ಯನು ಆ ಬಗ್ಗೆ ನೋಟೀಸನ್ನು ನೀಡತಕ್ಕದ್ದು ಮತ್ತು ಯಾವ ಕಾರಣಗಳ ಮೇಲೆ ಅದನ್ನು ಮಾಡಲಾಗಿದೆಯೋ ಆ ಕಾರಣಗಳನ್ನು ಬರಹದಲ್ಲಿ ತಿಳಿಸತಕ್ಕದ್ದು.

(3) ಸದರಿ ಪ್ರಸ್ತಾವವನ್ನು ಪರಿಶೀಲನೆಗೆ ತೆಗೆದುಕೊಳ್ಳುವುದಕ್ಕೆ ಮೊದಲು ಪ್ರಶಾಸನ ಸಭೆಯು ನೋಟೀಸಿನ ಒಂದು ಪ್ರತಿಯನ್ನು ಮತ್ತು (2)ನೇ ಉಪಪ್ರಕರಣದಲ್ಲಿ ತಿಳಿಸಲಾದ ಲಿಖಿತ ಹೇಳಿಕೆಯನ್ನು, ತಿಳಿವಳಿಕೆ ಪತ್ರದಲ್ಲಿ ನಿರ್ದಿಷ್ಟಪಡಿಸಿದ ಅವಧಿಯೊಳಗೆ ಕಾಲೇಜಿನ ಪರವಾಗಿ ಸಲ್ಲಿಸಲಾಗುವ ಯಾವುದೇ ಮನವಿಯನ್ನು ಪ್ರಶಾಸನ ಸಭೆಯು ಪರಿಶೀಲಿಸುತ್ತದೆಯೆಂಬ ತಿಳಿವಳಿಕೆ ಪತ್ರದೊಂದಿಗೆ ಸಂಬಂಧಪಟ್ಟ ಕಾಲೇಜಿನ ಪ್ರಾಚಾರ್ಯರಿಗೆ ಕಳುಹಿಸತಕ್ಕದ್ದು:

ಪರಂತು ಹಾಗೆ ನಿರ್ದಿಷ್ಟಪಡಿಸಲಾದ ಅವಧಿಯನ್ನು ಅವಶ್ಯವಿದ್ದರೆ ಪ್ರಶಾಸನ ಸಭೆಯು ವಿಸ್ತರಿಸಬಹುದು.

(4) ಮನವಿಯನ್ನು ಸ್ವೀಕರಿಸಿದ ಮೇಲೆ ಅಥವಾ (3)ನೇ ಉಪ-ಪ್ರಕರಣದಲ್ಲಿ ಉಲ್ಲೇಖಿಸಲಾದ ಅವಧಿಯು ಮುಕ್ತಾಯವಾದ ಮೇಲೆ ಪ್ರಶಾಸನ ಸಭೆಯು ಪ್ರಸ್ತಾವದ ನೋಟೀಸು, ಹೇಳಿಕೆ ಮತ್ತು ಮನವಿಯನ್ನು ಪರಿಶೀಲಿಸಿದ ತರುವಾಯ ಮತ್ತು ಈ ಬಗ್ಗೆ ಅಧಿಕಾರ ನೀಡಲಾದ ಯಾವೊಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳಿಂದ ತನಗೆ ಅವಶ್ಯವೆಂದು ಕಂಡುಬರಬಹುದಾದಂಥ ಪರಿವೀಕ್ಷಣೆಯನ್ನು ಮತ್ತು ಅಂಥ ಹೆಚ್ಚಿನ ವಿಚಾರಣೆಯನ್ನು ನಡೆಸಿದ ತರುವಾಯ ಸಂಯೋಜನೆಯನ್ನು ಹಿಂತೆಗೆದುಕೊಳ್ಳುವುದನ್ನು ಕುರಿತ ಒಂದು ನಿರ್ಣಯವನ್ನು, ಅದಕ್ಕೆ ತನ್ನ ಕಾರಣವನ್ನು ತಿಳಿಸುತ್ತಾ ಹೊರಡಿಸತಕ್ಕದ್ದು ಮತ್ತು ಅದನ್ನು ಪ್ರಶಿಕ್ಷಣ ಪರಿಷತ್ತಿಗೆ ಕಳುಹಿಸತಕ್ಕದ್ದು.

(5) (4)ನೇ ಉಪಪ್ರಕರಣದ ಅಡಿಯಲ್ಲಿನ ನಿರ್ಣಯವನ್ನು ಸ್ವೀಕರಿಸಿದ ಮೇಲೆ ಪ್ರಶಿಕ್ಷಣ ಪರಿಷತ್ತು ತನಗೆ ಅವಶ್ಯವೆಂದು ಕಂಡುಬರಬಹುದಾದಂಥ ಹೆಚ್ಚಿನ ವಿಚಾರಣೆ ಏನಾದರೂ ಇದ್ದಲ್ಲಿ ಅದನ್ನು ನಡೆಸಿದ ತರುವಾಯ ವಿಷಯದ ಬಗ್ಗೆ ತನ್ನ ಅಭಿಪ್ರಾಯವನ್ನು ದಾಖಲು ಮಾಡತಕ್ಕದ್ದು ಮತ್ತು ಅದನ್ನು ಪ್ರಶಾಸನ ಸಭೆಗೆ ಹಿಂತಿರುಗಿಸತಕ್ಕದ್ದು.

(6) ಪ್ರಶಾಸನ ಸಭೆಯು, ಪ್ರಶಿಕ್ಷಣ ಪರಿಷತ್ತಿನ ಅಭಿಪ್ರಾಯವನ್ನು ಪರ್ಯಾಲೋಚಿಸಿದ ತರುವಾಯ ಸಂಯೋಜನೆಯನ್ನು ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ಶಿಫಾರಸ್ಸು ಮಾಡುವ ಅಂತಿಮ ನಿರ್ಣಯವನ್ನು ಹೊರಡಿಸತಕ್ಕದ್ದು. ಅಂಥ ನಿರ್ಣಯವು ಪ್ರಶಾಸನ ಸಭೆಯಲ್ಲಿ ಹಾಜರಿದ್ದ ಸದಸ್ಯರ ಮೂರನೇ ಎರಡರಷ್ಟು ಸದಸ್ಯರ ಬೆಂಬಲವನ್ನು ಪಡೆದ ಹೊರತು ಸಭೆಯಿಂದ ಅಂಗೀಕೃತವಾಗಿರುವುದಾಗಿ ಭಾವಿಸತಕ್ಕದ್ದಲ್ಲ.

(7) ಕುಲಸಚಿವರು, ಪ್ರಸ್ತಾವವನ್ನು ಮತ್ತು ಅದಕ್ಕೆ ಸಂಬಂಧಿಸಿದ ಪ್ರಶಿಕ್ಷಣ ಪರಿಷತ್ತು, ಪ್ರಶಾಸನ ಸಭೆಯ ವ್ಯವಹರಣೆಗಳೇನಾದರೂ ಇದ್ದಲ್ಲಿ ಅವುಗಳೆಲ್ಲವನ್ನು ಸರ್ಕಾರಕ್ಕೆ ಒಪ್ಪಿಸತಕ್ಕದ್ದು ಮತ್ತು ಸರ್ಕಾರವು ತನಗೆ ಅವಶ್ಯವೆಂದು ಕಂಡುಬರಬಹುದಾದಂಥ ವಿಚಾರಣೆಯೇನಾದರೂ ಇದ್ದಲ್ಲಿ ಅದನ್ನು ನಡೆಸಿದ ತರುವಾಯ ವಿಶ್ವವಿದ್ಯಾಲಯಕ್ಕೆ ತಮ್ಮ ಶಿಫಾರಸುಗಳನ್ನು ಮಾಡತಕ್ಕದ್ದು ಮತ್ತು ಆ ತರುವಾಯ ವಿಶ್ವವಿದ್ಯಾಲಯವು ಅದಕ್ಕನುಗುಣವಾಗಿ ಆದೇಶವನ್ನು ಮಾಡತಕ್ಕದ್ದು.

(8) (6)ನೇ ಉಪ-ಪ್ರಕರಣದಡಿಯ ಶಿಫಾರಸ್ಸಿನ ಮೇಲಿನ ಆದೇಶದಿಂದ ಸಂಯೋಜನೆಯ ಮೂಲಕ ಪ್ರದತ್ತವಾದ ಹಕ್ಕುಗಳನ್ನು ಸಂಪೂರ್ಣವಾಗಿ ಅಥವಾ ಭಾಗಶಃ ಹಿಂತೆಗೆದುಕೊಂಡಿರುವಲ್ಲಿ ಅಥವಾ ಮಾರ್ಪಾಟು ಮಾಡಿರುವಲ್ಲಿ, ಅಂಥ ಹಿಂತೆಗೆದುಕೊಳ್ಳುವಿಕೆ ಅಥವಾ ಮಾರ್ಪಾಟಿಗೆ ಕಾರಣಗಳನ್ನು ಆದೇಶದಲ್ಲಿ ತಿಳಿಸತಕ್ಕದ್ದು.

**62. ಸ್ವಾಯತ್ತ ಕಾಲೇಜು.–** (1) ಈ ಅಧಿನಿಯಮದಲ್ಲಿ ಅಥವಾ ಅದರ ಅಡಿಯಲ್ಲಿ ರಚಿತವಾದ ಶಾಸನಗಳು, ಪರ್ಯಾದೇಶಗಳು ಮತ್ತು ವಿನಿಯಮಗಳಲ್ಲಿ ಏನೇ ಇದ್ದಾಗ್ಯೂ, ವಿಶ್ವವಿದ್ಯಾಲಯವು, ರಾಜ್ಯ ಸರ್ಕಾರದ ಪೂರ್ವ ಸಹಮತಿ ಪಡೆದು ಈ ಸಂಬಂಧದಲ್ಲಿ ರಚಿಸಲಾದ ಶಾಸನಗಳಲ್ಲಿ ನಿಯಮಿಸಬಹುದಾದಂಥ ಪ್ರಕ್ರಿಯೆಯನ್ನು ಅನುಸರಿಸಿದ ತರುವಾಯ, ಅಂಥ ಷರತ್ತುಗಳಿಗೆ ಒಳಪಟ್ಟು ಮತ್ತು ಶಿಕ್ಷಣದ ಗುಣಮಟ್ಟವನ್ನು ಸುಧಾರಿಸುವ ಹಾಗೂ ಹೊಸ ಮತ್ತು ಸುಸಂಗತ ವ್ಯಾಸಂಗ ಕ್ರಮಗಳನ್ನು ಪ್ರಾರಂಭಿಸುವ ದೃಷ್ಟಿಯಿಂದ ಒಂದು ಸಂಯೋಜಿತ ಕಾಲೇಜು, ವಿಭಾಗ ಅಥವಾ ಘಟಕಗಳನ್ನು ಯಾವುದೇ ವ್ಯಾಸಂಗ ಕ್ರಮಕ್ಕಾಗಿ ನಿರ್ದಿಷ್ಟ ಪಡಿಸಬಹುದಾದಂಥ ಅವಧಿಗಾಗಿ ಸ್ವಾಯತ್ತ ಕಾಲೇಜೆಂದು ಹೆಸರಿಸಬಹುದು.

(2) ಈ ಸಂಬಂಧದಲ್ಲಿ ರಚಿಸಲಾದ ಶಾಸನಗಳಿಗೆ ಒಳಪಟ್ಟು, ಸ್ವಾಯತ್ತ ಕಾಲೇಜೆಂದು ಹೆಸರಿಸಲಾದ ಕಾಲೇಜು, ವಿಶ್ವವಿದ್ಯಾಲಯದ ಪದವಿ ಅಥವಾ ಡಿಪ್ಲೋಮಗಳನ್ನು ನೀಡುವುದಕ್ಕೆ ಸಂಬಂಧಿಸಿದಂತೆ ಸೂಕ್ತ ವ್ಯಾಸಂಗ ಕ್ರಮಗಳನ್ನು ವಿನ್ಯಾಸಗೊಳಿಸಲು ಸೂಕ್ತ ಬೋಧನಾ ಕ್ರಮಗಳನ್ನು ರೂಪಿಸಲು, ಮೌಲ್ಯಮಾಪನ ಪರೀಕ್ಷೆ ಮತ್ತು ಉಪಪರೀಕ್ಷೆಗಳನ್ನು ವ್ಯವಸ್ಥೆಗೊಳಿಸಲು ಮತ್ತು ವಿದ್ಯಾರ್ಥಿಗಳಿಗೆ ಪ್ರವೇಶ ಕೊಡುವ ಬಗ್ಗೆ ನಿಯಮಗಳನ್ನು ರಚಿಸಲು ಹಕ್ಕುಳ್ಳದ್ದಾಗಿರತಕ್ಕದ್ದು;

(3) ಶಾಸನಗಳಲ್ಲಿ ನಿಯಮಿಸಬಹುದಾದಂಥ ನಿಯತಕಾಲಿಕ ಪುನರವಲೋಕನಕ್ಕೆ ಒಳಪಟ್ಟು, ವಿಶ್ವವಿದ್ಯಾಲಯವು, ರಾಜ್ಯಸರ್ಕಾರದ ಪೂರ್ವ ಸಹಮತಿಯೊಡನೆ, ನಿರ್ದಿಷ್ಟಪಡಿಸಬಹುದಾಂಥ ಹೆಚ್ಚಿನ ಅವಧಿಯವರೆಗೆ ಸ್ವಾಯತ್ತ ಕಾಲೇಜೆಂಬ ನಾಮಾಂಕಿತವನ್ನು ಮುಂದುವರಿಸಬಹುದು ಅಥವಾ ಅಂಥ ನಾಮಾಂಕಿತವನ್ನು ರದ್ದುಗೊಳಿಸಬಹುದು.

(4) ವಿಶ್ವವಿದ್ಯಾಲಯವು ಪ್ರಶಿಕ್ಷಣ ಪರಿಷತ್ತಿನೊಂದಿಗೆ ಸಮಾಲೋಚಿಸಿ ಈ ಉದ್ದೇಶಕ್ಕಾಗಿ ಶಾಸನಗಳನ್ನು ರಚಿಸತಕ್ಕದ್ದು, ಮತ್ತು ಅವು,–

(ಎ) ಒಂದು ಸಂಯೋಜನೆಗೊಂಡ ಕಾಲೇಜು, ವಿಭಾಗ ಅಥವಾ ಘಟಕವನ್ನು ಯಾವ ವಿಧಾನ ಮತ್ತು ಯಾವ ಷರತ್ತುಗಳಿಗೆ ಒಳಪಟ್ಟು ಸ್ವಾಯತ್ತ ಕಾಲೇಜು ಎಂದು ನಾಮಾಂಕಿತಗೊಳಿಸಬಹುದೋ ಅಥವಾ ಅಂಥ ಕಾಲೇಜಿನ ನಾಮಾಂಕಿತವನ್ನು ರದ್ದುಗೊಳಿಸಬಹುದೋ ಆ ವಿಧಾನ ಮತ್ತು ಷರತ್ತುಗಳನ್ನು;

(ಬಿ) ಸ್ವಾಯತ್ತ ಕಾಲೇಜಿನ ಆಡಳಿತ ನಿಕಾಯ, ಪ್ರಶಿಕ್ಷಣ ಪರಿಷತ್ತು, ಅಧ್ಯಯನ ಮಂಡಳಿ ಮತ್ತು ಪರೀಕ್ಷಕರ ಮಂಡಳಿಯ ರಚನೆ ಅಥವಾ ಪುನಾರಚನೆ, ಪ್ರಕಾರ್ಯಗಳು, ಅಧಿಕಾರಗಳು ಮತ್ತು ಕರ್ತವ್ಯಗಳನ್ನು ಒಳಗೊಂಡಂತೆ ಸ್ವಾಯತ್ತ ಕಾಲೇಜಿನ ಆಡಳಿತಕ್ಕೆ ಪ್ರಾಸಂಗಿಕವಾದ ವಿಷಯಗಳನ್ನು;

(ಸಿ) ವಿದ್ಯಾರ್ಥಿಗಳ ಪ್ರವೇಶಕ್ಕೆ ಸಂಬಂಧಿಸಿದ ವಿಷಯಗಳನ್ನು;

(ಡಿ) ಸ್ವಾಯತ್ತ ಕಾಲೇಜೆಂಬ ನಾಮಾಂಕಿತದ ಮುಂದುವರಿಕೆ ಅಥವಾ ರದ್ದುಪಡಿಸುವಿಕೆ ಕುರಿತು ನಿಯತಕಾಲಿಕ ಪುನರವಲೋಕನ;

(ಇ) (2)ನೇ ಉಪಪ್ರಕರಣದಲ್ಲಿ ನಮೂದಿಸಿದ ವಿಷಯಗಳೂ ಸೇರಿದಂತೆ ಸ್ವಾಯತ್ತ ಕಾಲೇಜಿನ ಕಾರ್ಯನಿರ್ವಹಣೆಗೆ ಸುಸಂಗತವಾಗಬಹುದಾದಂಥ ಇತರ ವಿಷಯಗಳನ್ನು;

– ಕುರಿತು ಉಪಬಂಧ ಕಲ್ಪಿಸತಕ್ಕದ್ದು.

**63. ಕಾಲೇಜುಗಳ ಅಥವಾ ವ್ಯಾಸಂಗ ಕ್ರಮದ ಸ್ವಯಂ ಮುಚ್ಚುವಿಕೆ.–** (1) ತನ್ನ ಅಸಾಮರ್ಥ್ಯದ ಕಾರಣದಿಂದ ಅಥವಾ ಹಣಕಾಸು ದೃಷ್ಟಿಯಿಂದ ಊರ್ಜಿತವಾಗದ ಕಾರಣದಿಂದ ಅಥವಾ ಆಡಳಿತ ವ್ಯವಸ್ಥೆಯು ಕುಸಿದ ಕಾರಣದಿಂದ ಕಾಲೇಜನ್ನು ಅಥವಾ ವ್ಯಾಸಂಗಕ್ರಮವನ್ನು ಮುಚ್ಚಲು ಉದ್ದೇಶಿಸಿರುವಂತಹ ಯಾವುದೇ ಕಾಲೇಜಿನ ಆಡಳಿತ ಮಂಡಳಿಯು, ವಿಶ್ವವಿದ್ಯಾಲಯಕ್ಕೆ ಮತ್ತು ರಾಜ್ಯ ಸರ್ಕಾರಕ್ಕೆ, ಕಾಲೇಜನ್ನು ಮುಚ್ಚುವುದಕ್ಕೆ ಮೊದಲು ಮೂರು ತಿಂಗಳುಗಳಿಗಿಂತ ಕಡಿಮೆಯಿಲ್ಲದಂತೆ ಆ ಬಗ್ಗೆ ಕಾರಣಗಳನ್ನು ತಿಳಿಸಿ ಲಿಖಿತ ನೋಟೀಸನ್ನು ನೀಡತಕ್ಕದ್ದು.

(2) ಕಾಲೇಜಿನ ಅಥವಾ ವ್ಯಾಸಂಗ ಕ್ರಮದ ಮುಚ್ಚುವಿಕೆಯ ಅರ್ಜಿಯನ್ನು ಪ್ರಶಿಕ್ಷಣ ಪರಿಷತ್ತು ಮತ್ತು ಪ್ರಶಾಸನ ಸಭೆಗಳು ಪರಿಗಣಿಸತಕ್ಕದ್ದು ಮತ್ತು ಪ್ರಶಾಸನ ಸಭೆಯು ಅದರ ಮೇಲೆ ಸೂಕ್ತ ಗೊತ್ತುವಳಿಗಳನ್ನು ಮಾಡತಕ್ಕದ್ದು.

(3) ಕುಲಸಚಿವರು, ಅರ್ಜಿಯನ್ನು ಮತ್ತು ಪ್ರಶಿಕ್ಷಣ ಪರಿಷತ್ತಿನ ಮತ್ತು ಪ್ರಶಾಸನ ಸಭೆಯ ಗೊತ್ತುವಳಿಗಳನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು, ಅದು ಅವುಗಳನ್ನು ಪರಿಗಣಿಸಿದ ತರುವಾಯ ಮುಚ್ಚುವ ಬಗ್ಗೆ ಅನುಮತಿ ನೀಡುವ ಅಥವಾ ಮುಚ್ಚುವಿಕೆಗೆ ಅನುಮತಿ ನಿರಾಕರಿಸುವ ಬಗ್ಗೆ ವಿಶ್ವವಿದ್ಯಾಲಯಕ್ಕೆ ನಿರ್ದೇಶನ ನೀಡತಕ್ಕದ್ದು ಮತ್ತು ವಿಶ್ವವಿದ್ಯಾಲಯವು ಅಂಥ ನಿರ್ದೇಶನಗಳನ್ನು ಸ್ವೀಕರಿಸಿದ ತರುವಾಯ ಅದಕ್ಕನುಸಾರ ಆದೇಶಗಳನ್ನು ಹೊರಡಿಸತಕ್ಕದ್ದು.

(4) ಆಡಳಿತ ಮಂಡಳಿಯು, ಶೈಕ್ಷಣಿಕ ವರ್ಷದ ಚಾಲ್ತಿ ಅವಧಿಯಲ್ಲಿ ಮತ್ತು ವಿಶ್ವವಿದ್ಯಾಲಯವು ಸಂಬಂಧಪಟ್ಟ ವ್ಯಾಸಂಗಕ್ರಮದ ವಾರ್ಷಿಕ ಪರೀಕ್ಷೆಗಳನ್ನು ನಡೆಸುವವರೆಗೆ ಮತ್ತು ವಿಶ್ವವಿದ್ಯಾಲಯವು ಹಾಗೆ ಮಾಡುವುದಕ್ಕಾಗಿ ಒಂದು ಔಪಚಾರಿಕ ಆದೇಶವನ್ನು ಹೊರಡಿಸುವವರೆಗೆ ಕಾಲೇಜನ್ನು ಅಥವಾ ವ್ಯಾಸಂಗ ಕ್ರಮವನ್ನು ಮುಚ್ಚತಕ್ಕದ್ದಲ್ಲ.

(5) ಹಾಗೆ ಮುಚ್ಚಲಾದ ಕಾಲೇಜುಗಳ ವಿದ್ಯಾರ್ಥಿಗಳಿಗೆ ಅವರ ವರ್ಗಾವಣೆಯ ನಂತರ, ವಿಶ್ವವಿದ್ಯಾಲಯವು, ಹತ್ತಿರವಿರುವ ಕಾಲೇಜಿನಲ್ಲಿ ಸಂಬಂಧಪಟ್ಟ ವ್ಯಾಸಂಗಕ್ರಮದಲ್ಲಿ ಪ್ರವೇಶ ಸಂಖ್ಯೆಯನ್ನು ಅಂಥ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ನೀಡುವಷ್ಟರಮಟ್ಟಿಗೆ ಹೆಚ್ಚಿಸಿ ಪ್ರವೇಶವನ್ನು ನೀಡತಕ್ಕದ್ದು ಮತ್ತು ಅಂಥ ವಿದ್ಯಾರ್ಥಿಗಳಿಗೆ ಸಂಬಂಧಪಟ್ಟ ಎಲ್ಲ ದಾಖಲೆಗಳನ್ನು ಹಾಗೆ ಮುಚ್ಚಲ್ಪಟ್ಟ ಕಾಲೇಜಿನಿಂದ, ಯಾವ ಕಾಲೇಜಿನಲ್ಲಿ ಅಂಥ ವಿದ್ಯಾರ್ಥಿಗಳು ಪ್ರವೇಶವನ್ನು ಪಡೆದಿರುವರೋ ಅಲ್ಲಿಗೆ ವರ್ಗಾಯಿಸತಕ್ಕದ್ದು.

(6) (1)ನೇ ಉಪಪ್ರಕರಣದ ಅಡಿಯಲ್ಲಿ ನೋಟೀಸಿನ ಅವಧಿಯು ಮುಕ್ತಾಯವಾದ ತರುವಾಯ ತೊಂಬತ್ತು ದಿನಗಳೊಳಗೆ, ಹಾಗೆ ಮುಚ್ಚುವ ಬಗ್ಗೆ ಅನುಮತಿ ನೀಡುವ ಅಥವಾ ನಿರಾಕರಿಸುವ ಯಾವುದೇ ನಿರ್ದೇಶನವನ್ನು ರಾಜ್ಯ ಸರ್ಕಾರವು ನೀಡದಿದ್ದರೆ, (4)ನೇ ಉಪಪ್ರಕರಣದ ಉಪಬಂಧಗಳಿಗೊಳಪಟ್ಟು, ಕಾಲೇಜನ್ನು ಅಥವಾ ಸಂದರ್ಭಾನುಸಾರ ವ್ಯಾಸಂಗಕ್ರಮವನ್ನು ಮುಚ್ಚಲು ಆಡಳಿತ ಮಂಡಳಿಗೆ ಅನುಮತಿ ನೀಡಲಾಗಿದೆ ಎಂದು ಭಾವಿಸತಕ್ಕದ್ದು.

## ಅಧ್ಯಾಯ – VIII

## ವಿಶ್ವವಿದ್ಯಾಲಯದ ಅಧ್ಯಾಪಕರು ಮತ್ತು ಇತರ ನೌಕರರ ನೇಮಕಾತಿ

**64. ಅಧ್ಯಾಪಕರು ಮೊದಲಾದವರ ನೇಮಕಾತಿ.–** (1) ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರು, ಗ್ರಂಥಪಾಲಕ, ಪ್ರವಾಚಕರು ಮತ್ತು ಉಪನ್ಯಾಸಕರಾಗಿ ನೇಮಕ ಮಾಡಿಕೊಳ್ಳಲು ವ್ಯಕ್ತಿಗಳನ್ನು ಆಯ್ಕೆಮಾಡುವುದಕ್ಕಾಗಿ ಒಂದು ನೇಮಕಾತಿ ಮಂಡಳಿ ಇರತಕ್ಕದ್ದು.

(2) ಅಂಥ ಪ್ರತಿಯೊಂದು ಮಂಡಳಿಯು,–

(ಎ) ಪ್ರಾಧ್ಯಾಪಕರ ಮತ್ತು ಪ್ರವಾಚಕರುಗಳ ಹುದ್ದೆಗಳಿಗೆ ಮತ್ತು ಗ್ರಂಥಪಾಲಕ ಹುದ್ದೆಗಳಿಗೆ ಆಯ್ಕೆಮಾಡಲು,–

(i) ಕುಲಪತಿಯವರು–ಪದನಿಮಿತ್ತ ಅಧ್ಯಕ್ಷರು;

(ii) ಸಂಬಂಧಪಟ್ಟ ವಿಭಾಗದ ಅಧ್ಯಕ್ಷರು ಪ್ರಾಧ್ಯಾಪಕರಾಗಿದ್ದರೆ ಅವರು, ಪ್ರಾಧ್ಯಾಪಕರಾಗಿರದಿದ್ದರೆ ಕುಲಾಧಿಪತಿಯವರು ಸರ್ಕಾರದೊಡನೆ ಸಮಾಲೋಚನೆ ನಡೆಸಿ ನಾಮನಿರ್ದೇಶಿಸಿದ ರಾಜ್ಯದ ಇತರ ಯಾವುದೇ ವಿಶ್ವವಿದ್ಯಾಲಯದ ಒಬ್ಬ ಪ್ರಾಧ್ಯಾಪಕರು ಮತ್ತು ರಾಜ್ಯದ ಯಾವುದೇ ವಿಶ್ವವಿದ್ಯಾಲಯದಲ್ಲಿ

ಅಂಥ ಪ್ರಾಧ್ಯಾಪಕರು ಲಭ್ಯವಾಗದೇ ಇದ್ದರೆ, ರಾಜ್ಯದಲ್ಲಿರುವ ಕೇಂದ್ರದ ಸಂಸ್ಥೆಯಿಂದ ಅಥವಾ ಇತರ ಯಾವುದೇ ರಾಜ್ಯದ ವಿಶ್ವವಿದ್ಯಾಲಯದಿಂದ ಕುಲಾಧಿಪತಿಯವರು ನಾಮನಿರ್ದೇಶಿಸಿದ ಸಂಬಂಧಪಟ್ಟ ವಿಭಾಗದ ಪ್ರಾಧ್ಯಾಪಕರು;

(iii) ಕುಲಾಧಿಪತಿಯವರು ರಾಜ್ಯ ಸರ್ಕಾರದೊಡನೆ ಸಮಾಲೋಚನೆ ನಡೆಸಿ ರಾಜ್ಯದ ಯಾವುದೇ ವಿಶ್ವವಿದ್ಯಾಲಯದಲ್ಲಿ ಅಥವಾ ರಾಜ್ಯ ಸರ್ಕಾರವು ಮಾನ್ಯತೆ ನೀಡಿದ ಇತರ ಯಾವುದೇ ಸಂಸ್ಥೆಯಲ್ಲಿ ಸೇವೆ ಸಲ್ಲಿಸುತ್ತಿರುವ ವ್ಯಕ್ತಿಗಳ ಪೈಕಿ ನಾಮನಿರ್ದೇಶಿಸಿದ ನಾಲ್ವರು ವಿಷಯ ತಜ್ಞರು;

– ಇವರುಗಳನ್ನು ಒಳಗೊಂಡಿರತಕ್ಕದ್ದು.

(ಬಿ) ಉಪನ್ಯಾಸಕರ ಹುದ್ದೆಗಳಿಗೆ ಆಯ್ಕೆ ಮಾಡಲು,-

(i) ಕುಲಪತಿಯವರು-ಪದನಿಮಿತ್ತ ಅಧ್ಯಕ್ಷರು;

(ii) ಕುಲಾಧಿಪತಿಯವರು ನಾಮನಿರ್ದೇಶಿಸಿದ ಇಬ್ಬರು ವಿಷಯ ತಜ್ಞರು;

(iii) ಸಂಬಂಧಪಟ್ಟ ವಿಭಾಗದ ಅಧ್ಯಕ್ಷರು ಪ್ರಾಧ್ಯಾಪಕರಾಗಿದ್ದರೆ ಅವರು, ಪ್ರಾಧ್ಯಾಪಕರಾಗಿರದಿದ್ದರೆ ಕುಲಾಧಿಪತಿಯವರು ಸರ್ಕಾರದೊಡನೆ ಸಮಾಲೋಚನೆ ನಡೆಸಿ ನಾಮನಿರ್ದೇಶಿಸಿದ ರಾಜ್ಯದ ಇತರ ಯಾವುದೇ ವಿಶ್ವವಿದ್ಯಾಲಯದ ಸಂಬಂಧಪಟ್ಟ ವಿಭಾಗದ ಒಬ್ಬ ಪ್ರಾಧ್ಯಾಪಕರು ಮತ್ತು ರಾಜ್ಯದೊಳಗಿನ ಯಾವುದೇ ವಿಶ್ವವಿದ್ಯಾಲಯದಲ್ಲಿ ಅಂಥ ಪ್ರಾಧ್ಯಾಪಕರು ಲಭ್ಯವಾಗದೆ ಇದ್ದರೆ ರಾಜ್ಯದೊಳಗಿನ ಕೇಂದ್ರದ ಸಂಸ್ಥೆಯಿಂದ ಅಥವಾ ಇತರ ಯಾವುದೇ ರಾಜ್ಯದ ವಿಶ್ವವಿದ್ಯಾಲಯದಿಂದ ಕುಲಾಧಿಪತಿಯವರು ನಾಮನಿರ್ದೇಶಿಸಿದಂಥ ಸಂಬಂಧಪಟ್ಟ ವಿಭಾಗದ ಪ್ರಾಧ್ಯಾಪಕರು;

(iv) ಕುಲಾಧಿಪತಿಯವರು ಸರ್ಕಾರದೊಡನೆ ಸಮಾಲೋಚನೆ ನಡೆಸಿ ನಾಮನಿರ್ದೇಶಿಸಿದ ರಾಜ್ಯದ ಇತರ ಯಾವುದೇ ವಿಶ್ವವಿದ್ಯಾಲಯದ ಒಬ್ಬ ಪ್ರಾಧ್ಯಾಪಕರು;

– ಇವರನ್ನು ಒಳಗೊಂಡಿರತಕ್ಕದ್ದು.

(3) ಕುಲಸಚಿವರು ನೇಮಕಾತಿ ಮಂಡಳಿಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸತಕ್ಕದ್ದು.

(4) ಆಯ್ಕೆಯ ಮೂಲಕ ಭರ್ತಿಮಾಡಿಕೊಳ್ಳಲಾಗುವ ಪ್ರಾಧ್ಯಾಪಕ, ಗ್ರಂಥಪಾಲಕ, ಪ್ರವಾಚಕ ಅಥವಾ ಉಪನ್ಯಾಸಕರ ಪ್ರತಿಯೊಂದು ಹುದ್ದೆಯನ್ನು ಅಗತ್ಯಪಡಿಸಲಾದ ಕನಿಷ್ಠ ಮತ್ತು ಇತರ ವಿದ್ಯಾರ್ಹತೆಯೇನಾದರೂ ಇದ್ದಲ್ಲಿ ಅದನ್ನು, ಉಪಲಬ್ಧಿಗಳು ಮತ್ತು ಭರ್ತಿಮಾಡಬೇಕಾದ ಹುದ್ದೆಗಳ ಸಂಖ್ಯೆ ಇವುಗಳೊಂದಿಗೆ ವಿಧ್ಯುಕ್ತವಾಗಿ ಮತ್ತು ವ್ಯಾಪಕವಾಗಿ ಜಾಹೀರಾತು ಕೊಡತಕ್ಕದ್ದು ಮತ್ತು ಅರ್ಜಿದಾರರು ಯಾವ ಕಾಲಾವಕಾಶದೊಳಗೆ ಅರ್ಜಿಯನ್ನು ಸಲ್ಲಿಸಬಹುದೋ ಅಂಥ ಸೂಕ್ತ ಕಾಲಾವಕಾಶವನ್ನು ಕೊಡತಕ್ಕದ್ದು.

(5) ನೇಮಕಾತಿ ಮಂಡಳಿಯ ಸಭೆಗೆ ನಾಲ್ವರು ಸದಸ್ಯರ ಕೋರಂ ಇರತಕ್ಕದ್ದು. ಅವರ ಪೈಕಿ ಪ್ರಾಧ್ಯಾಪಕರುಗಳ, ಪ್ರವಾಚಕರುಗಳ ಮತ್ತು ಗ್ರಂಥಪಾಲಕರ ಹುದ್ದೆಗಳ ಆಯ್ಕೆಯ ಸಂದರ್ಭದಲ್ಲಿ ಕಡೆಯ ಪಕ್ಷ ಇಬ್ಬರು ತಜ್ಞರಿರತಕ್ಕದ್ದು ಮತ್ತು ಇತರ ಹುದ್ದೆಗಳ ಆಯ್ಕೆಯ ಸಂದರ್ಭದಲ್ಲಿ ಕಡೆಯಪಕ್ಷ ಒಬ್ಬರು ತಜ್ಞರಿರತಕ್ಕದ್ದು.

(6) ಮಂಡಳಿಯು, ಈ ಸಂಬಂಧದಲ್ಲಿ ರಚಿಸಲಾದ ಶಾಸನಗಳ ಉಪಬಂಧಗಳಿಗೆ ಒಳಪಟ್ಟು ಸಂದರ್ಶನವನ್ನು ನಡೆಸಿ, ಜಾಹೀರಾತು ಮಾಡಿದ ವಿದ್ಯಾರ್ಹತೆಗನುಸಾರವಾಗಿ ಪ್ರತಿಯೊಬ್ಬ ಅಭ್ಯರ್ಥಿಯ ಅರ್ಹತೆಯನ್ನು ನಿರ್ಣಯಿಸತಕ್ಕದ್ದು ಮತ್ತು ಆಯ್ಕೆಯಾದ ವ್ಯಕ್ತಿಗಳ ಪಟ್ಟಿಯನ್ನು ಅರ್ಹತೆಯ ಕ್ರಮಾನುಸಾರವಾಗಿ ಸಿದ್ಧಪಡಿಸತಕ್ಕದ್ದು, ಈ ಪಟ್ಟಿಯನ್ನು ಪ್ರಶಾಸನ ಸಭೆಗೆ ಕಳುಹಿಸತಕ್ಕದ್ದು ಮತ್ತು ಪ್ರಶಾಸನ ಸಭೆಯು ಅದಕ್ಕನುಸಾರವಾಗಿ ನೇಮಕಗಳನ್ನು ಮಾಡಿಕೊಳ್ಳತಕ್ಕದ್ದು. ಮಂಡಳಿ ಮತ್ತು ಪ್ರಶಾಸನ ಸಭೆಯ ನಡುವೆ ಭಿನ್ನಾಭಿಪ್ರಾಯ ಉಂಟಾದ ಸಂದರ್ಭದಲ್ಲಿ ವಿಷಯವನ್ನು ಕುಲಾಧಿಪತಿಯವರಿಗೆ ಉಲ್ಲೇಖಿಸತಕ್ಕದ್ದು ಮತ್ತು ಅವರ ನಿರ್ಣಯವೇ ಅಂತಿಮವಾಗಿರತಕ್ಕದ್ದು.

***ವಿವರಣೆ:-*** ಪಟ್ಟಿಯು ಈ ಅಧಿನಿಯಮದ ಉಪಬಂಧಗಳು ಅಥವಾ ಅಂಥ ನೇಮಕಾತಿಗೆ ಸಂಬಂಧಿಸಿದ ಶಾಸನಗಳಿಗೆ ಅನುಗುಣವಾಗಿಲ್ಲವೆಂದು ಪ್ರಶಾಸನ ಸಭೆಯು ಅಭಿಪ್ರಾಯಪಟ್ಟಲ್ಲಿ ಈ ಪ್ರಕರಣದಲ್ಲಿರುವುದು ಯಾವುದೂ ಪ್ರಶಾಸನ ಸಭೆಯು ಸದರಿ ಪಟ್ಟಿಗನುಸಾರವಾಗಿಯೇ ನೇಮಕಗಳನ್ನು ಮಾಡಿಕೊಳ್ಳಲು ಅಗತ್ಯಪಡಿಸುವುದೆಂದು ಅರ್ಥಕಲ್ಪಿಸತಕ್ಕದ್ದಲ್ಲ.

(7) (6)ನೇ ಉಪ-ಪ್ರಕರಣದಡಿ ಪಟ್ಟಿಯನ್ನು ತಯಾರಿಸುವಾಗ ಮಂಡಳಿಯು ಅನುಸೂಚಿತ ಜಾತಿ, ಅನುಸೂಚಿತ ಪಂಗಡಗಳು ಮತ್ತು ನಾಗರಿಕರ ಇತರ ಹಿಂದುಳಿದ ವರ್ಗಗಳಿಗಾಗಿ ಹುದ್ದೆಗಳನ್ನು ಮೀಸಲಿಡುವ ವಿಷಯದಲ್ಲಿ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿದ ಆದೇಶಗಳನ್ನು ಅನುಸರಿಸತಕ್ಕದ್ದು.

(8) ಹಿಂದಿನ ಉಪ-ಪ್ರಕರಣಗಳಲ್ಲಿ ಏನೇ ಇದ್ದರೂ, ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ ಪದವಿ ಕಾಲೇಜುಗಳಲ್ಲಿನ ಪ್ರಾಧ್ಯಾಪಕರು ಮತ್ತು ಪ್ರವಾಚಕರ ಹುದ್ದೆಗಳಿಗೆ ನೇಮಕ ಮಾಡುವಾಗ ಶಾಸನಗಳಿಂದ ನಿಯಮಿಸಬಹುದಾದಂಥ ಪ್ರಾಧಿಕಾರವು ಅನುಕ್ರಮವಾಗಿ ಪ್ರವಾಚಕರು ಮತ್ತು ಉಪನ್ಯಾಸಕರುಗಳಿಗೆ ಜ್ಯೇಷ್ಠತೆ ಹಾಗೂ ಅರ್ಹತೆ ಆಧಾರದ ಮೇಲೆ ಬಡ್ತಿ ನೀಡಿ ನೇಮಕ ಮಾಡತಕ್ಕದ್ದು:

ಪರಂತು, ಯಾವುದೇ ಹೊಸ ವಿಷಯವನ್ನು ಪ್ರಾರಂಭಿಸಿದಾಗಲೆಲ್ಲಾ, ಅಂಥ ಹೊಸ ವಿಷಯದಲ್ಲಿ ಪ್ರಾಧ್ಯಾಪಕರುಗಳ, ಪ್ರವಾಚಕರ ಮತ್ತು ಉಪನ್ಯಾಸಕರುಗಳ ನೇಮಕಾತಿಯನ್ನು ಶಾಸನಗಳ ಮೂಲಕ ನಿಯಮಿಸಬಹುದಾದಂಥ ವಿಧಾನದಲ್ಲಿ ಮಾಡತಕ್ಕದ್ದು.

(9) ಹಿಂದಿನ ಉಪ-ಪ್ರಕರಣದಲ್ಲಿ ಏನೇ ಇದ್ದರೂ, ಪರಸ್ಪರವಾಗಿ ಒಪ್ಪಿಕೊಳ್ಳಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ವಿಶ್ವವಿದ್ಯಾಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕರ ಹುದ್ದೆಯನ್ನು ಒಪ್ಪಿಕೊಳ್ಳಲು ಅತ್ಯುನ್ನತ ವಿದ್ಯಾಪ್ರಶಸ್ತಿಯನ್ನು ಪಡೆದಿರುವ ಹಾಗೂ ವೃತ್ತಿಪರ ಸಾಧನೆಯನ್ನು ಮಾಡಿರುವ ಒಬ್ಬ ವ್ಯಕ್ತಿಯನ್ನು ಕುಲಪತಿಯವರ ಶಿಫಾರಸಿನ ಮೇಲೆ ಆಹ್ವಾನಿಸಲು ಪ್ರಶಾಸನ ಸಭೆಯು ಸಕ್ಷಮವಾಗಿರತಕ್ಕದ್ದು:

ಪರಂತು, ಯಾವುದೇ ನಿರ್ದಿಷ್ಟ ಸಮಯದಲ್ಲಿ ಒಂದು ವಿಶ್ವವಿದ್ಯಾಲಯದಲ್ಲಿ ಅಂಥ ಸಂದರ್ಶಕ-ಪ್ರಾಧ್ಯಾಪಕರು ನಾಲ್ವರಿಗಿಂತ ಹೆಚ್ಚಿರತಕ್ಕದ್ದಲ್ಲ.

**65. ಬಡ್ತಿ ಯೋಜನೆಗಳಿಗನುಸಾರವಾಗಿ ನೇಮಕಾತಿ.-** 64ನೇ ಪ್ರಕರಣದಲ್ಲಿ ಏನೇ ಇದ್ದರೂ, ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ನೇಮಕಾತಿಯ ಮತ್ತು ಹುದ್ದೆಗಳ ಮೀಸಲಾತಿ ಬಗ್ಗೆ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿದ ನಿಯಮಗಳಿಗೆ ಮತ್ತು ಆದೇಶಗಳಿಗೆ ಒಳಪಟ್ಟು, ವಿಶ್ವವಿದ್ಯಾಲಯದ ಸಂಸ್ಥೆಗಳು ಮತ್ತು ವಿಭಾಗಗಳಲ್ಲಿನ ಪ್ರವಾಚಕರುಗಳ ಮತ್ತು ಪ್ರಾಧ್ಯಾಪಕರುಗಳ ಹುದ್ದೆಗಳಿಗೆ ನೇಮಕಗಳನ್ನು, ವಿಶ್ವವಿದ್ಯಾಲಯ ಸಂಸ್ಥೆ ಅಥವಾ ವಿಭಾಗವು ಪದವಿ ಮತ್ತು ಸ್ನಾತಕೋತ್ತರ ವ್ಯಾಸಂಗ ಕ್ರಮಗಳನ್ನು ಹೊಂದಿದ್ದರೆ, ಈ ಸಂಬಂಧದಲ್ಲಿ ಶಾಸನಗಳಿಂದ ನಿಯಮಿಸಲಾದ ಬಡ್ತಿ ಯೋಜನೆ ಏನಾದರೂ ಇದ್ದರೆ ಆ ಯೋಜನೆಯ ಅನುಸಾರವಾಗಿ ಪ್ರಶಾಸನ ಸಭೆಯು ಮಾಡತಕ್ಕದ್ದು.

**66. ಅರೆಕಾಲಿಕ ಹುದ್ದೆಗಳ ನೇಮಕಾತಿ.-** (1) ವಿಶ್ವವಿದ್ಯಾಲಯದಲ್ಲಿ ಅರೆಕಾಲಿಕ ಉಪನ್ಯಾಸಕರು, ಸಹಾಯಕ ಪ್ರಾಧ್ಯಾಪಕರು, ಪ್ರವಾಚಕರು ಮತ್ತು ಪ್ರಾಧ್ಯಾಪಕರ ನೇಮಕಾತಿಗೆ, ವ್ಯಕ್ತಿಗಳ ಆಯ್ಕೆಗಾಗಿ ಒಂದು ನೇಮಕಾತಿ ಮಂಡಳಿ ಇರತಕ್ಕದ್ದು. ಮಂಡಳಿಯು ಈ ಮುಂದಿನವರುಗಳನ್ನು ಒಳಗೊಂಡಿರತಕ್ಕದ್ದು.

(i) ಕುಲಪತಿಯವರು – ಪದನಿಮಿತ್ತ ಅಧ್ಯಕ್ಷರು;

(ii) ಕುಲಾಧಿಪತಿಯವರು ನಾಮನಿರ್ದೇಶಿಸಿದ ಇಬ್ಬರು ತಜ್ಞರು;

(iii) ಸಂಬಂಧಪಟ್ಟ ವಿಭಾಗದ ಮುಖ್ಯಸ್ಥರು;

(iv) ಕಾನೂನು ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ ಅಥವಾ ಉಪಕಾರ್ಯದರ್ಶಿಯ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತರು;

(v) ಕುಲಸಚಿವರು – ಇವರು ಸದಸ್ಯ ಕಾರ್ಯದರ್ಶಿಯಾಗಿರತಕ್ಕದ್ದು;

(vi) ಸಮಾಜ ಕಲ್ಯಾಣ ಇಲಾಖೆಯ ನಿರ್ದೇಶಕರು ಅಥವಾ ಉಪ ನಿರ್ದೇಶಕರ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತರು;

(vii) ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಯ ನಿರ್ದೇಶಕರು ಅಥವಾ ಉಪನಿರ್ದೇಶಕರ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತರು;

(viii) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಅಥವಾ ಉಪನಿರ್ದೇಶಕರ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತರು:

ಪರಂತು, ಕಾನೂನು ಕಾಲೇಜುಗಳ ಯಾವುದೇ ಹುದ್ದೆಯ ನೇಮಕಾತಿಗೆ ಮಂಡಳಿಯ ಇಬ್ಬರು ತಜ್ಞರಾಗಿ, ಕರ್ನಾಟಕದ ಅಡ್ವೋಕೇಟ್ ಜನರಲ್ ಮತ್ತು ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ, ಅಥವಾ ಜಂಟಿ ಕಾರ್ಯದರ್ಶಿಯವರ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಅವರ ನಾಮನಿರ್ದೇಶಿತರು ಇರತಕ್ಕದ್ದು.

(2) ಪ್ರತಿಯೊಂದು ಅರೆಕಾಲಿಕ ಹುದ್ದೆಗೆ ಎಲ್ಲಾ ಅಗತ್ಯ ವಿವರಗಳೊಂದಿಗೆ ವ್ಯಾಪಕ ಜಾಹೀರಾತನ್ನು ನೀಡತಕ್ಕದ್ದು ಮತ್ತು ಅಭ್ಯರ್ಥಿಗಳನ್ನು ಸಂದರ್ಶಿಸುವ ಮೂಲಕ ಆಯ್ಕೆ ಮಾಡತಕ್ಕದ್ದು.

(3) ಮಂಡಳಿ ಸಭೆಯ ಕೋರಂ ಮೂರು ಆಗಿರತಕ್ಕದ್ದು.

(4) ಮಂಡಳಿಯು ಆಯ್ಕೆಯಾದ ವ್ಯಕ್ತಿಗಳ ಪಟ್ಟಿಯನ್ನು ತಯಾರಿಸತಕ್ಕದ್ದು ಮತ್ತು ಪ್ರಶಾಸನ ಸಭೆಗೆ ಆ ಪಟ್ಟಿಯನ್ನು ಕಳುಹಿಸತಕ್ಕದ್ದು. ಪ್ರಶಾಸನ ಸಭೆಯು ಅವರನ್ನು ನೇಮಕಮಾಡತಕ್ಕದ್ದು.

(5) ಯಾವುದೇ ಅರೆಕಾಲಿಕ ನೇಮಕವನ್ನು ಒಂದು ವರ್ಷಕ್ಕಿಂತ ಹೆಚ್ಚಿನ ಅವಧಿಗೆ ಮಾಡತಕ್ಕದ್ದಲ್ಲ.

**67. ತಾತ್ಕಾಲಿಕ ನೇಮಕ.–** 64, 65, 66 ಮತ್ತು 68ನೇ ಪ್ರಕರಣಗಳಲ್ಲಿ ಏನೇ ಇದ್ದರೂ, ಕೆಲವೊಂದು ಹುದ್ದೆಗಳು ತಾತ್ಕಾಲಿಕವಾದವು ಆಗಿರುವ ಸಂದರ್ಭದಲ್ಲಿ ಇಲ್ಲವೇ ಅಂಥ ಹುದ್ದೆಗಳಿಗೆ ವಿಳಂಬ ಮಾಡದೇ 64, 65, 66 ಮತ್ತು 68ನೇ ಪ್ರಕರಣಗಳನ್ವಯ ನೇಮಕಾತಿ ಮಾಡಲು ಸಾಧ್ಯವಿರದಿರುವಲ್ಲಿ ಉಪನ್ಯಾಸಕರ ಮತ್ತು ಶಾಸನಗಳಲ್ಲಿ ನಿರ್ದಿಷ್ಟವಾಗಿ ಹೇಳಿದಂಥ ಬೋಧಕೇತರ ಸಿಬ್ಬಂದಿಗೆ ಕುಲಪತಿಯು ಒಂದು ವರ್ಷಕ್ಕಿಂತ ಹೆಚ್ಚಿಲ್ಲದ ಅವಧಿಗೆ ತಾತ್ಕಾಲಿಕ ನೇಮಕಗಳನ್ನು ಮಾಡಬಹುದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ನೇಮಕಾತಿಗಳನ್ನು ಮಂಜೂರಾದ ಹುದ್ದೆಗಳಿಗೆ ಮತ್ತು ಶಾಸನಗಳ ಮೂಲಕ ನಿಯಮಿಸಲಾದ ವಿಧಾನದಲ್ಲಿ ಮಾತ್ರ ಮಾಡತಕ್ಕದ್ದು.

**68. ಇತರ ಬೋಧಕೇತರ ಮತ್ತು ಲಿಪಿಕ ಸಿಬ್ಬಂದಿಯ ನೇಮಕಾತಿ.–** (1) ವಿಶ್ವವಿದ್ಯಾಲಯದಲ್ಲಿ ಬೋಧಕೇತರ ಹುದ್ದೆಗಳಿಗೆ ಮತ್ತು ಲಿಪಿಕ ಹುದ್ದೆಗಳಿಗೆ ನೇಮಕಾತಿಗಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಒಂದು ನೇಮಕಾತಿ ಮಂಡಳಿಯನ್ನು ರಚಿಸತಕ್ಕದ್ದು.

(2) ಮಂಡಳಿಯು ಈ ಮುಂದಿನವರನ್ನು ಒಳಗೊಂಡಿರತಕ್ಕದ್ದು:–

(i) ಕುಲಪತಿಯವರು–ಪದನಿಮಿತ್ತ ಅಧ್ಯಕ್ಷರು;

(ii) ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿಗಳು ಅಥವಾ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಅಪರ ಕಾರ್ಯದರ್ಶಿಗಳ ದರ್ಜೆಗೆ ಕಡಿಮೆಯಿಲ್ಲದ ದರ್ಜೆಯ ಅವರ ನಾಮ ನಿರ್ದೇಶಿತರು;

(iii) ಕುಲಪತಿಯವರು ನಾಮನಿರ್ದೇಶಿಸಿದ ಒಬ್ಬ ತಜ್ಞರು;

(iv) ಕುಲಸಚಿವರು;

(v) ಸಮಾಜ ಕಲ್ಯಾಣ ಇಲಾಖೆಯ ನಿರ್ದೇಶಕರು ಅಥವಾ ಜಂಟಿ/ಉಪ ನಿರ್ದೇಶಕರ ದರ್ಜೆಗೆ ಕಡಿಮೆಯಿಲ್ಲದ ದರ್ಜೆಯ ಅವರ ನಾಮ ನಿರ್ದೇಶಿತರು;

(vi) ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಯ ನಿರ್ದೇಶಕರು ಅಥವಾ ಜಂಟಿ/ಉಪ ನಿರ್ದೇಶಕರ ದರ್ಜೆಗೆ ಕಡಿಮೆಯಿಲ್ಲದ ದರ್ಜೆಯ ಅವರ ನಾಮ ನಿರ್ದೇಶಕರು;

(vii) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಅಥವಾ ಜಂಟಿ/ಉಪ ನಿರ್ದೇಶಕರ ದರ್ಜೆಗೆ ಕಡಿಮೆಯಿಲ್ಲದ ದರ್ಜೆಯ ಅವರ ನಾಮ ನಿರ್ದೇಶಿತರು.

(3) ಮಂಡಳಿಯ ಸಭೆಯ ಕೋರಂ ನಾಲ್ಕು ಆಗಿರತಕ್ಕದ್ದು.

(4) ಶಾಸನಗಳಿಗನುಸಾರವಾಗಿ ನೇರ ನೇಮಕಾತಿ ಮೂಲಕ ಭರ್ತಿ ಮಾಡಬೇಕಾದಂಥ ಹುದ್ದೆಗಳಿಗೆ ಮಂಡಳಿಯು ಆಯ್ಕೆ ಮಾಡಿದ ವ್ಯಕ್ತಿಗಳನ್ನು, ಮಂಡಳಿಯು ಸಿದ್ಧಪಡಿಸಿದ ಪಟ್ಟಿಯಲ್ಲಿ ಅವರ ಹೆಸರುಗಳಿರುವ ಕ್ರಮದಲ್ಲಿ ಭರ್ತಿ ಮಾಡಿಕೊಳ್ಳತಕ್ಕದ್ದು. ಹುದ್ದೆಗಳ ಯಾವುದೇ ಪ್ರವರ್ಗದ ಸಂಬಂಧದಲ್ಲಿ ಶಾಸನಗಳಲ್ಲಿ ನಿಯಮಿಸಬಹುದಾದಂತೆ ಹುದ್ದೆಗಳಿಗೆ ಬಡ್ತಿ, ಪ್ರತಿನಿಯೋಜನೆ ಅಥವಾ ವರ್ಗಾವಣೆ ಅಥವಾ ಕರಾರಿನ ಮೂಲಕ ನೇಮಕಾತಿಯನ್ನು ಮಂಡಳಿಯೊಂದಿಗೆ ಸಮಾಲೋಚಿಸಿದ ತರುವಾಯ, ಮಾಡತಕ್ಕದ್ದು.

(5) ನೇರ ನೇಮಕಾತಿ ಮೂಲಕ ಭರ್ತಿ ಮಾಡಬೇಕಾದ ಖಾಲಿ ಸ್ಥಾನಗಳಿಗೆ ನೇಮಕಾತಿಗಾಗಿ ಆಯ್ಕೆ ಮಾಡಿದ ಅಭ್ಯರ್ಥಿಗಳ ಪಟ್ಟಿಯನ್ನು ಸಿದ್ಧಪಡಿಸುವಾಗ, ಮಂಡಳಿಯು, ಸರ್ಕಾರವು ಕಾಲಕಾಲಕ್ಕೆ ಅನುಸೂಚಿತ ಜಾತಿಗಳು, ಅನುಸೂಚಿತ ಪಂಗಡಗಳು ಮತ್ತು ಇತರ ಹಿಂದುಳಿದ ವರ್ಗಗಳಿಗೆ ಹುದ್ದೆಗಳನ್ನು ಮೀಸಲಿರಿಸುವುದಕ್ಕಾಗಿ ಹೊರಡಿಸಿದ ಆದೇಶಗಳನ್ನು ಪಾಲಿಸತಕ್ಕದ್ದು.

(6) ಎಲ್ಲ ನೇಮಕಾತಿಗಳನ್ನು ಪ್ರಶಾಸನ ಸಭೆಯು ಮಾಡತಕ್ಕದ್ದು ಮತ್ತು ಮಂಡಳಿ ಮತ್ತು ಪ್ರಶಾಸನ ಸಭೆಯ ನಡುವೆ ಭಿನ್ನಾಭಿಪ್ರಾಯ ಉಂಟಾದ ಸಂದರ್ಭದಲ್ಲಿ, ವಿಷಯವನ್ನು ಕುಲಾಧಿಪತಿಯವರಿಗೆ ಉಲ್ಲೇಖಿಸತಕ್ಕದ್ದು ಮತ್ತು ಅವರ ತೀರ್ಮಾನವು ಅಂತಿಮವಾಗಿರತಕ್ಕದ್ದು:

ಪರಂತು, ವೇತನ ಶ್ರೇಣಿಯ ಗರಿಷ್ಠ ಮಿತಿಯು ಎರಡು ಸಾವಿರದ ಇಪ್ಪತ್ತನಾಲ್ಕು ರೂಪಾಯಿಗಳನ್ನು ಮೀರದಂಥ ಹುದ್ದೆಗಳಿಗೆ ನೇಮಕಾತಿಯನ್ನು ಕುಲಪತಿಯವರು ಮಾಡತಕ್ಕದ್ದು.

(7) ಹಿಂದಿನ ಉಪ-ಪ್ರಕರಣಗಳಲ್ಲಿ ಏನೇ ಇದ್ದರೂ, ರಾಜ್ಯ ಸಿವಿಲ್ ಸೇವೆಗಳ 'ಸಿ' ಮತ್ತು 'ಡಿ' ಗುಂಪುಗಳ ಹುದ್ದೆಗಳಿಗೆ ಸಮನಾದ ವಿಶ್ವವಿದ್ಯಾಲಯದಲ್ಲಿನ ಹುದ್ದೆಗಳಿಗೆ ಈ ಉದ್ದೇಶಕ್ಕಾಗಿ ರಚಿಸಲಾಗುವ ಶಾಸನಗಳಿಗೆ ಅನುಸಾರವಾಗಿ ಮತ್ತು ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅನುಸೂಚಿತ ಜಾತಿಗಳು, ಪಂಗಡಗಳು ಮತ್ತು ಇತರ ಹಿಂದುಳಿದ ವರ್ಗಗಳಿಗಾಗಿ ಹುದ್ದೆಗಳನ್ನು ಮೀಸಲಿರಿಸುವ ಬಗ್ಗೆ ಹೊರಡಿಸಿದ ಆದೇಶಕ್ಕನುಸಾರವಾಗಿ ಕುಲಪತಿಯವರು ನೇಮಕಾತಿಯನ್ನು ಮಾಡತಕ್ಕದ್ದು.

**69. ಅನುಸೂಚಿತ ಜಾತಿ ಮೊದಲಾದವರಿಗಾಗಿ ಬಡ್ತಿ ಖಾಲಿ ಸ್ಥಾನಗಳ ಮೀಸಲಾತಿ.-** ವಿಶ್ವವಿದ್ಯಾಲಯದಲ್ಲಿ ಯಾವುದೇ ಹುದ್ದೆಗೆ ಬಡ್ತಿಯ ಮೂಲಕ ನೇಮಕ ಮಾಡುವಲ್ಲಿ, ಅಂಥ ನೇಮಕವನ್ನು ಮಾಡಲು ಅಧಿಕಾರವನ್ನು ಹೊಂದಿರುವ ಪ್ರಾಧಿಕಾರವು, ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳಿಗೆ ಬಡ್ತಿಯ ಖಾಲಿ ಸ್ಥಾನಗಳಲ್ಲಿ ಹುದ್ದೆಗಳ ಮೀಸಲಾತಿಗಾಗಿ ಕಾಲಕಾಲಕ್ಕೆ ಸರ್ಕಾರವು ಹೊರಡಿಸಿದ ಆದೇಶಗಳನ್ನು ಪಾಲಿಸತಕ್ಕದ್ದು.

**70. ನೌಕರಿಭರ್ತಿಮಾಡುವ ವಿಧಾನ ಮತ್ತು ಸೇವಾ ಷರತ್ತುಗಳು.-** ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ನೌಕರಿಭರ್ತಿಮಾಡುವ ವಿಧಾನ, ನೇಮಕಾತಿ, ಆಯ್ಕೆ ಕಾರ್ಯವಿಧಾನ ವೇತನ ಮತ್ತು ಭತ್ಯೆಗಳು ಮತ್ತು ವಿಶ್ವವಿದ್ಯಾಲಯದ ಸಿಬ್ಬಂದಿಗಳ ಇತರ ಸೇವಾ ಷರತ್ತುಗಳು ಶಾಸನಗಳ ಮೂಲಕ ನಿಯಮಿಸ ಬಹುದಾದಂಥವಾಗಿರತಕ್ಕದ್ದು.

**71. ನಿವೃತ್ತಿವೇತನ, ಉಪದಾನ ಇತ್ಯಾದಿ.-** (1) ವಿಶ್ವವಿದ್ಯಾಲಯವು, ಅದರ ಉದ್ಯೋಗಿಗಳ ಪ್ರಯೋಜನಕ್ಕಾಗಿ ಶಾಸನಗಳ ಮೂಲಕ ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ಅಂಥ ಷರತ್ತುಗಳಿಗೊಳಪಟ್ಟು ತಾನು ಸೂಕ್ತವೆಂದು ಭಾವಿಸಬಹುದಾದಂಥ ನಿವೃತ್ತಿ ವೇತನ, ಉಪದಾನ ಮತ್ತು ಭವಿಷ್ಯನಿಧಿ ಯೋಜನೆಗಳನ್ನು ರಚಿಸತಕ್ಕದ್ದು.

(2) ವಿಶ್ವವಿದ್ಯಾಲಯವು (1)ನೇ ಉಪಪ್ರಕರಣದ ಅಡಿಯಲ್ಲಿ ಭವಿಷ್ಯನಿಧಿಯನ್ನು ಸ್ಥಾಪಿಸಿದ್ದಲ್ಲಿ, ಸರ್ಕಾರವು, ಭವಿಷ್ಯನಿಧಿಗಳ ಅಧಿನಿಯಮ, 1925ರ (1925ರ ಕೇಂದ್ರ ಅಧಿನಿಯಮ III) ಉಪಬಂಧಗಳು, ಅಂಥ ನಿಧಿಗೆ ಅದು ಸರ್ಕಾರಿ ಭವಿಷ್ಯನಿಧಿ ಎಂಬಂತೆ ಅನ್ವಯಿಸತಕ್ಕದ್ದೆಂದು ಘೋಷಿಸಬಹುದು.

(3) ಸರ್ಕಾರಿ ಸೇವೆಯಲ್ಲಿರುವ ವ್ಯಕ್ತಿಗಳನ್ನು ಈ ಅಧಿನಿಯಮದ ಅಡಿಯಲ್ಲಿ, ವಿಶ್ವವಿದ್ಯಾಲಯಕ್ಕೆ ವರ್ಗಾಯಿಸಿದರೆ, ಅವರು, ಕರ್ನಾಟಕ ಸಿವಿಲ್ ಸೇವಾ ನಿಯಮಗಳಡಿ ಅಥವಾ ವಿಶ್ವವಿದ್ಯಾಲಯಕ್ಕೆ ಅವರ ವರ್ಗಾವಣೆಯಾಗುವುದಕ್ಕೆ ಮೊದಲು ಅವರಿಗೆ ಅನ್ವಯವಾಗುತ್ತಿದ್ದಂಥ ಇತರ ನಿಯಮಗಳಡಿ ನಿವೃತ್ತಿ ವೇತನ ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು.

(4) ವಿಶ್ವವಿದ್ಯಾಲಯವು, ಹಣಕಾಸು ಸಮಿತಿಯೊಂದಿಗೆ ಸಮಾಲೋಚಿಸಿ ತಾನು ಉಚಿತವೆಂದು ಭಾವಿಸಬಹುದಾದಂಥ ರೀತಿಯಲ್ಲಿ ಭವಿಷ್ಯನಿಧಿಯನ್ನು ತೊಡಗಿಸಬಹುದು.

## ಅಧ್ಯಾಯ IX

## ಬೋಧಕೇತರ ಸಿಬ್ಬಂದಿಗಳ ಅಂತರ ವಿಶ್ವವಿದ್ಯಾಲಯ ವರ್ಗಾವಣೆ

**72. ಬೋಧಕೇತರ ಸಿಬ್ಬಂದಿಯ ವರ್ಗಾವಣೆ-** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕರಾರು, ಒಪ್ಪಂದ ಅಥವಾ ಯಾವುದೇ ಇತರ ಕಾನೂನಿನಲ್ಲಿ ಮತ್ತು ವಿಶ್ವವಿದ್ಯಾಲಯದ ನೌಕರರಿಗೆ ಅನ್ವಯವಾಗುವ ಸೇವಾ ಷರತ್ತುಗಳಲ್ಲಿ ಏನೇ ಇದ್ದರೂ, ಕುಲಾಧಿಪತಿಯವರು, ರಾಜ್ಯ ಸರ್ಕಾರದೊಡನೆ ಸಮಾಲೋಚಿಸಿ, ಆಡಳಿತಾತ್ಮಕ ಕಾರಣಗಳಿಗಾಗಿ, ವಿಶ್ವವಿದ್ಯಾಲಯದಲ್ಲಿ ಯಾವುದೇ ಹುದ್ದೆಯನ್ನು ಧಾರಣ ಮಾಡಿರುವ ಯಾವೊಬ್ಬ ಬೋಧಕೇತರ ನೌಕರನನ್ನು ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ, 2000ದಡಿಯಲ್ಲಿ (2001ರ ಕರ್ನಾಟಕ ಅಧಿನಿಯಮ 29) ಅಥವಾ ರಾಜ್ಯ ವಿಧಾನಮಂಡಲದಿಂದ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ಸ್ಥಾಪಿಸಲಾದ ಯಾವುದೇ ಇತರ ವಿಶ್ವವಿದ್ಯಾಲಯಕ್ಕೆ ಅಥವಾ ಅಂಥ ಇತರ ವಿಶ್ವವಿದ್ಯಾಲಯದ ಬೋಧಕೇತರ ನೌಕರನನ್ನು ಈ ಅಧ್ಯಾದೇಶದ ಅಡಿಯಲ್ಲಿ ರಚಿಸಲಾದ ವಿಶ್ವವಿದ್ಯಾಲಯಕ್ಕೆ ವರ್ಗಾವಣೆ ಮಾಡಬಹುದು ಮತ್ತು ಹಾಗೆ ವರ್ಗಾವಣೆಗೊಂಡ ಬೋಧಕೇತರ ನೌಕರನು ಯಾವ ವಿಶ್ವವಿದ್ಯಾಲಯಕ್ಕೆ ಅವನನ್ನು

ವರ್ಗಾಯಿಸಲಾಗಿದೆಯೋ ಆ ವಿಶ್ವವಿದ್ಯಾಲಯಕ್ಕೆ, ವರ್ಗಾವಣೆಯ ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಸೇವಾ ಷರತ್ತುಗಳೊಂದಿಗೆ ಹೋಗತಕ್ಕದ್ದು. ವರ್ಗಾವಣೆಗೊಂಡ ತರುವಾಯ ಅಂಥ ಬೋಧಕೇತರ ನೌಕರನು ವರ್ಗಾವಣೆಗೊಂಡ ವಿಶ್ವವಿದ್ಯಾಲಯದ ಸಕ್ಷಮಪ್ರಾಧಿಕಾರದಿಂದ ನೇಮಕಗೊಂಡಿದ್ದಾನೆಂದು ಭಾವಿಸತಕ್ಕದ್ದು:

ಪರಂತು, ಹಾಗೆ ವರ್ಗಾವಣೆಗೊಂಡ ನೌಕರನು ತಾನು ಪ್ರಾರಂಭದಲ್ಲಿ ನೇಮಕಗೊಂಡ ವಿಶ್ವವಿದ್ಯಾಲಯದಲ್ಲಿನ ತನ್ನ ಹುದ್ದೆಯ ಧಾರಣಾಧಿಕಾರವನ್ನು ಉಳಿಸಿಕೊಳ್ಳುವ ಅಥವಾ ತಾನು ವರ್ಗಾವಣೆಗೊಂಡ ವಿಶ್ವವಿದ್ಯಾಲಯದಲ್ಲಿ ವಿಲೀನಗೊಳ್ಳುವ ಆಯ್ಕೆಯ ಅವಕಾಶವನ್ನು ಹೊಂದಿರತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ನೌಕರನ ಅಂಥ ವರ್ಗಾವಣೆಯ ಆದೇಶವನ್ನು ನೀಡುವ ಉದ್ದೇಶಕ್ಕಾಗಿ, ಹಾಗೆ ವರ್ಗಾವಣೆಗೊಂಡ ನೌಕರನು ಧಾರಣ ಮಾಡಿದ್ದ ಹುದ್ದೆಗಳ ಸಂಬಂಧದಲ್ಲಿ ಕುಲಾಧಿಪತಿಯವರನ್ನು ನೇಮಕ ಪ್ರಾಧಿಕಾರವೆಂದು ಭಾವಿಸತಕ್ಕದ್ದು.

(3) ಹಾಗೆ ವರ್ಗಾವಣೆಗೊಂಡ ನೌಕರನು, ರಾಜ್ಯ ಸಿವಿಲ್ ಸೇವೆಗಳ ಸಂವಾದಿ ಹುದ್ದೆಗಳಿಗೆ ಅನ್ವಯವಾಗುವ ಶ್ರೇಣಿಗಳಲ್ಲಿ ದೊರೆಯಬಹುದಾದ ಪ್ರಯಾಣಭತ್ಯೆ, ವರ್ಗಾವಣೆ ಅನುದಾನ ಮತ್ತು ವೈಯಕ್ತಿಕ ಸಾಮಗ್ರಿಗಳ ಸಾಗಣೆ ವೆಚ್ಚ ಪಡೆಯಲು ಅರ್ಹನಾಗಿರತಕ್ಕದ್ದು.

(4) ಸಾರ್ವಜನಿಕ ಹಿತಾಸಕ್ತಿಯಲ್ಲಿ ಹಾಗೆ ವರ್ಗಾವಣೆಗೊಂಡ ಮತ್ತು ತಾನು ನೇಮಕಗೊಂಡ ವಿಶ್ವವಿದ್ಯಾಲಯದಲ್ಲಿ ತನ್ನ ಧಾರಣಾಧಿಕಾರವನ್ನು ಉಳಿಸಿಕೊಳ್ಳುವ ಆಯ್ಕೆ ಮಾಡಿಕೊಳ್ಳದ ಒಬ್ಬ ನೌಕರನ ಜ್ಯೇಷ್ಠತೆಯನ್ನು ಆಯಾ ಉದ್ಯೋಗಿ ವೃಂದ ಅಥವಾ ಹುದ್ದೆಯಲ್ಲಿ ಆತನು ಮೊದಲು ನೇಮಕಗೊಂಡ ದಿನಾಂಕಕ್ಕೆ ಅನುಗುಣವಾಗಿ ನಿರ್ಧರಿಸತಕ್ಕದ್ದು.

## ಅಧ್ಯಾಯ X

## ಪಟ್ಟಿಗೆ ಸೇರಿಸುವಿಕೆ ಮತ್ತು ಪದವಿಗಳು

**73. ವಿದ್ಯಾರ್ಥಿಗಳ ಪ್ರವೇಶಕ್ಕಾಗಿ ಅರ್ಹತೆ.-** ಯಾವ ವಿದ್ಯಾರ್ಥಿಯೂ ಕಾಲ ಕಾಲಕ್ಕೆ ಶಾಸನಗಳಿಂದ ನಿಯಮಿಸಬಹುದಾದಂಥ ಅರ್ಹತೆಗಳನ್ನು ಅವನು ಹೊಂದಿದ್ದ ಹೊರತು, ಪದವಿ ಅಥವಾ ಡಿಪ್ಲೋಮಾ ಅಧ್ಯಯನ ಕ್ರಮಗಳಿಗೆ ಪ್ರವೇಶಕ್ಕೆ ಅರ್ಹನಾಗಿರತಕ್ಕದ್ದಲ್ಲ.

**74. ಗೌರವ ಪದವಿಗಳು.–** (1) ಪ್ರಶಾಸನ ಸಭೆಯ ಮೂರನೇ ಎರಡರಷ್ಟಕ್ಕೆ ಕಡಿಮೆ ಇಲ್ಲದ ಸದಸ್ಯರು, ಯಾವೊಬ್ಬ ವ್ಯಕ್ತಿಗೆ, ಅವರ ಶ್ರೇಷ್ಠ ಸಾಧನೆ ಮತ್ತು ಸ್ಥಾನಮಾನದ ಕಾರಣದಿಂದಾಗಿ ತಮ್ಮ ಅಭಿಪ್ರಾಯದಲ್ಲಿ ಅಂಥ ಗೌರವ ಪದವಿ ಅಥವಾ ಇತರ ವಿದ್ಯಾವಿಷಯಕ ಪ್ರಶಸ್ತಿಯನ್ನು ಸ್ವೀಕರಿಸಲು ಯೋಗ್ಯ ಮತ್ತು ಸರಿಯಾದ ವ್ಯಕ್ತಿ ಎಂಬ ಆಧಾರದ ಮೇಲೆ ಗೌರವ ಪದವಿ ಅಥವಾ ವಿದ್ಯಾವಿಷಯಕ ಪ್ರಶಸ್ತಿಯನ್ನು ಪ್ರದಾನ ಮಾಡಬೇಕೆಂದು ಶಿಫಾರಸ್ಸು ಮಾಡಿದರೆ, ಪ್ರಶಾಸನ ಸಭೆಯು, ಸಂಬಂಧಪಟ್ಟ ವ್ಯಕ್ತಿಗೆ ಅದನ್ನು ಪ್ರದಾನ ಮಾಡಲು ಕುಲಾಧಿಪತಿಯವರ ಅನುಮೋದನೆಗಾಗಿ ಶಿಫಾರಸ್ಸು ಮಾಡಬಹುದು.

(2) ಗೌರವ ಪದವಿಯನ್ನು ಅಥವಾ ಪ್ರಶಸ್ತಿಯನ್ನು ವಿಶೇಷ ಸಂದರ್ಭಗಳಲ್ಲಿ ಮಾತ್ರ ಪ್ರದಾನ ಮಾಡತಕ್ಕದ್ದು. ಅದನ್ನು ಕೇವಲ ಒಂದು ವಾಡಿಕೆಯ ಕ್ರಮವಾಗಿ ಪ್ರದಾನ ಮಾಡತಕ್ಕದ್ದಲ್ಲ. ಕಾನೂನು ಸಾಹಿತ್ಯ, ಕಾನೂನು ತತ್ವಜ್ಞಾನ, ಕಾನೂನು ವೃತ್ತಿ, ಕಾನೂನು ಜ್ಞಾನ, ನ್ಯಾಯಾಡಳಿತ ಅಥವಾ ಕಾನೂನು ವ್ಯಾಸಂಗ ವಿಭಾಗಗಳಿಗೆ ವಹಿಸಿಕೊಡಲಾಗಿರುವ ಯಾವುದೇ ಇತರೆ ವಿಷಯದ ಮುನ್ನಡೆಗಾಗಿ ಗಣನೀಯ ಕೊಡುಗೆ ನೀಡಿದ ಅಥವಾ ಕಾನೂನು ಶಿಕ್ಷಣದ ಧ್ಯೇಯಗಳಿಗಾಗಿ ವಿಶಿಷ್ಟ ಸೇವೆ ಸಲ್ಲಿಸಿದ ವ್ಯಕ್ತಿಗಳನ್ನು ಅಂಥ ಗೌರವ ಪದವಿಗಳ ನೀಡಿಕೆಯ ಉದ್ದೇಶಕ್ಕಾಗಿ ಗುರುತಿಸತಕ್ಕದ್ದು.

(3) ಪ್ರತಿಷ್ಠಿತ ನ್ಯಾಯವಾದಿಗಳು, ನ್ಯಾಯಾಧೀಶರು, ಜ್ಯೂರಿಗಳು, ರಾಜಕೀಯ ಗಣ್ಯವ್ಯಕ್ತಿಗಳಿಗೆ ಅಥವಾ ಸಾರ್ವಜನಿಕ ಕ್ಷೇತ್ರದ ಧ್ಯೇಯಗಳಿಗಾಗಿ ಗಮನಾರ್ಹ ಕೊಡುಗೆ ನೀಡಿದ ವ್ಯಕ್ತಿಗಳಿಗೆ ಡಾಕ್ಟರ್ ಆಫ್ ಲಾಸ್ (ಎಲ್‌ಎಲ್.ಡಿ.) ಪದವಿಯನ್ನು ಹಾನರೀಸ್‌ಕಾಸ (ಗೌರವ ಪದವಿ) ಆಗಿ ಪ್ರದಾನ ಮಾಡಬಹುದು.

**75. ಪದವಿ ಅಥವಾ ಡಿಪ್ಲೊಮಾಗಳನ್ನು ಹಿಂತೆಗೆದುಕೊಳ್ಳುವುದು.–** (1) ಯಾವೊಬ್ಬ ವ್ಯಕ್ತಿಯು, ಒಂದು ಪದವಿಯನ್ನು, ಡಿಪ್ಲೊಮಾವನ್ನು ಅಥವಾ ಸರ್ಟಿಫಿಕೇಟನ್ನು ಮೋಸದಿಂದ ಅಥವಾ ಪ್ರವೇಶವನ್ನು ಸುಳ್ಳು ಜಾತಿ ಪ್ರಮಾಣಪತ್ರದ ಮೂಲಕ ಪಡೆದುಕೊಂಡಿದ್ದಾನೆಂದು ಕಂಡುಬಂದರೆ, ಪ್ರಶಿಕ್ಷಣ ಪರಿಷತ್ತಿನ ಶಿಫಾರಸ್ಸಿನ ಮೇಲೆ ಪ್ರಶಾಸನ ಸಭೆಯು, ತನ್ನ ಒಟ್ಟು ಬಹುಮತದಿಂದ ಮತ್ತು ಆ ಸಭೆಯಲ್ಲಿ ಹಾಜರಿದ್ದು ಮತ ಚಲಾಯಿಸುವ ಸದಸ್ಯರ ಮೂರನೆ ಎರಡರಷ್ಟಕ್ಕೆ ಕಡಿಮೆಯಿಲ್ಲದ ಬಹುಮತದಿಂದ ಅಂಗೀಕೃತವಾದ ನಿರ್ಣಯದ ಮೂಲಕ ಅಂಥ ಯಾವೊಬ್ಬ ವ್ಯಕ್ತಿಗೆ ಪ್ರದಾನ ಮಾಡಲಾಗಿದ್ದ ಅಥವಾ ಕೊಡಲಾಗಿದ್ದ ಅಂಥ ಯಾವುದೇ ಪ್ರಶಸ್ತಿ, ಪದವಿ, ಡಿಪ್ಲೊಮಾ ಅಥವಾ ವಿಶೇಷಾಧಿಕಾರವನ್ನು ಹಿಂತೆಗೆದುಕೊಳ್ಳಬಹುದು.

(2) ಈ ಪ್ರಕರಣದ ಅಡಿಯಲ್ಲಿ ಯಾವ ವ್ಯಕ್ತಿಗೂ ಆತನ ವಿರುದ್ಧ ಕೈಗೊಳ್ಳಬೇಕೆಂದು ಪ್ರಸ್ತಾವಿಸಿದ ಕ್ರಮದ ವಿರುದ್ಧ ಕಾರಣ ತೋರಿಸಲು ಅವನಿಗೆ ಅವಕಾಶವನ್ನು ಕೊಟ್ಟ ಹೊರತು, ಅಂಥ ಯಾವುದೇ ಕ್ರಮ ಕೈಗೊಳ್ಳತಕ್ಕದ್ದಲ್ಲ.

(3) ಪ್ರಶಾಸನ ಸಭೆಯು ಅಂಗೀಕರಿಸಿದ ನಿರ್ಣಯದ ಪ್ರತಿಯೊಂದನ್ನು ಸಂಬಂಧಪಟ್ಟ ವ್ಯಕ್ತಿಗೆ ಕೂಡಲೇ ಕಳುಹಿಸತಕ್ಕದ್ದು.

(4) ಪ್ರಶಾಸನ ಸಭೆಯು ತೆಗೆದುಕೊಂಡ ತೀರ್ಮಾನದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು, ಅಂಥ ನಿರ್ಣಯವನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ, ಕುಲಾಧಿಪತಿಗೆ ಅಪೀಲು ಸಲ್ಲಿಸಬಹುದು.

(5) ಅಂಥ ಅಪೀಲಿನ ಮೇಲೆ ಕುಲಾಧಿಪತಿಯವರ ತೀರ್ಮಾನವು ಅಂತಿಮವಾಗಿರತಕ್ಕದ್ದು.

## ಅಧ್ಯಾಯ - XI

## ವಿಶ್ವವಿದ್ಯಾಲಯ ಪುನರವಲೋಕನ ಆಯೋಗ

**76. ವಿಶ್ವವಿದ್ಯಾಲಯ ಪುನರವಲೋಕನ ಆಯೋಗದ ನೇಮಕಾತಿ.-** (1) ಕುಲಾಧಿಪತಿಯವರು, ವಿಶ್ವವಿದ್ಯಾಲಯದ ಕಾರ್ಯ ನಿರ್ವಹಣೆಯನ್ನು ಪುನರವಲೋಕಿಸಲು ಮತ್ತು ಶಿಫಾರಸ್ಸುಗಳನ್ನು ಮಾಡಲು ಪ್ರತಿ ಐದು ವರ್ಷಗಳಿಗೊಮ್ಮೆ ಒಂದು ಆಯೋಗವನ್ನು ರಚಿಸತಕ್ಕದ್ದು.

(2) ಆಯೋಗವು, ರಾಜ್ಯ ಸರ್ಕಾರದ ಶಿಫಾರಸ್ಸಿನ ಮೇಲೆ ಕುಲಾಧಿಪತಿಯವರಿಂದ ನೇಮಕಗೊಂಡ ಕನಿಷ್ಠ ಮೂವರು ಶ್ರೇಷ್ಠ ಶಿಕ್ಷಣ ತಜ್ಞರನ್ನು ಒಳಗೊಂಡಿರತಕ್ಕದ್ದು. ಅವರಲ್ಲಿ ಒಬ್ಬರು ಅಧ್ಯಕ್ಷರಾಗಿರತಕ್ಕದ್ದು.

(3) ಸದಸ್ಯರುಗಳ ನೇಮಕಾತಿಯ ನಿಬಂಧನೆಗಳು ಮತ್ತು ಷರತ್ತುಗಳು ಕುಲಾಧಿಪತಿಯವರು ನಿರ್ಧರಿಸಬಹುದಾದಂತೆ ಇರತಕ್ಕದ್ದು.

(4) ಆಯೋಗವು, ತಾನು ಸೂಕ್ತವೆನಿಸಬಹುದಾದಂಥ ವಿಚಾರಣೆಯನ್ನು ನಡೆಸಿದ ತರುವಾಯ, ಕುಲಾಧಿಪತಿಯವರಿಗೆ ಮತ್ತು ರಾಜ್ಯ ಸರ್ಕಾರಕ್ಕೆ ತನ್ನ ಶಿಫಾರಸ್ಸುಗಳನ್ನು ಕಳುಹಿಸತಕ್ಕದ್ದು.

(5) ಕುಲಾಧಿಪತಿಯವರು, ರಾಜ್ಯ ಸರ್ಕಾರದೊಡನೆ ಸಮಾಲೋಚಿಸಿದ ತರುವಾಯ ಆ ಶಿಫಾರಸ್ಸುಗಳ ಮೇಲೆ ತಾವು ಸೂಕ್ತವೆಂದು ಭಾವಿಸಬಹುದಾದಂಥ ಕ್ರಮ ಕೈಗೊಳ್ಳಬಹುದು.

(6) ರಾಜ್ಯ ಸರ್ಕಾರವು, ಶಿಫಾರಸುಗಳ ಪ್ರತಿಯನ್ನು ಅದರ ಮೇಲೆ ಕೈಗೊಂಡ ಕ್ರಮಗಳನ್ನೊಳಗೊಂಡ ವಿವರಣಾ ಪತ್ರದೊಡನೆ ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.

## ಅಧ್ಯಾಯ - XII

## ಪರೀಕ್ಷೆಯ ಕೆಲಸದಲ್ಲಿ ತೊಡಗಿರುವ ವ್ಯಕ್ತಿಗಳ ಪ್ರಕಾರ್ಯಗಳು ಮತ್ತು ಜವಾಬ್ದಾರಿಗಳು

**77. ಅಧ್ಯಾಪಕನ ಕರ್ತವ್ಯಗಳು.-** (1) ವಿಶ್ವವಿದ್ಯಾಲಯದ ಅಥವಾ ಸಂಯೋಜಿತ ಕಾಲೇಜಿನ ಪ್ರತಿಯೊಬ್ಬ ಅಧ್ಯಾಪಕನು, ಕಾಲಕಾಲಕ್ಕೆ ವಿಶ್ವವಿದ್ಯಾಲಯದಿಂದ ಅವನಿಗೆ ವಹಿಸಲಾದ ಬೋಧನೆ, ಸಂಶೋಧನೆ, ಪರೀಕ್ಷೆ ಅಥವಾ ಶೈಕ್ಷಣಿಕ ಕಾರ್ಯಗಳಿಗೆ ಸಂಬಂಧಪಟ್ಟ ಕೆಲಸಗಳನ್ನು ನಿರ್ವಹಿಸತಕ್ಕದ್ದು.

(2) (1)ನೇ ಉಪಪ್ರಕರಣದ ಉದ್ದೇಶಗಳಿಗಾಗಿ, ವಿಶ್ವವಿದ್ಯಾಲಯದ ಮತ್ತು ವಿಶ್ವವಿದ್ಯಾಲಯಕ್ಕೆ ಸಂಯೋಜನೆಗೊಂಡ ಕಾಲೇಜಿನ ಸೇವೆಯಲ್ಲಿರುವ ಬೋಧಕ ಮತ್ತು ಬೋಧಕೇತರ ನೌಕರರನ್ನು ವಿಶ್ವವಿದ್ಯಾಲಯವು ಆಡಳಿತಾತ್ಮಕವಾಗಿ ನಿಯಂತ್ರಿಸತಕ್ಕದ್ದು ಮತ್ತು ಅವರು ಕಾಲಕಾಲಕ್ಕೆ ವಿಶ್ವವಿದ್ಯಾಲಯವು ನೀಡಿದ ಸೂಚನೆಗಳು ಅಥವಾ ಆದೇಶಗಳನ್ನು ಪಾಲಿಸತಕ್ಕದ್ದು.

**78. ಪರೀಕ್ಷಾ ಕಾರ್ಯವನ್ನು ನೆರವೇರಿಸುವ ಹೊಣೆ.-** (1) ಯಾವ ವ್ಯಕ್ತಿಗೆ ಪ್ರಶ್ನೆ ಪತ್ರಿಕೆಯನ್ನು ಸಿದ್ಧಪಡಿಸುವುದು, ಪರಿವೀಕ್ಷಣೆ, ಮೇಲ್ವಿಚಾರಣೆ, ಮೌಲ್ಯಮಾಪನ, ಪ್ರಾಯೋಗಿಕ ಪರೀಕ್ಷೆಗಳನ್ನು ನಡೆಸುವುದು, ಪ್ರಶ್ನೆ ಪತ್ರಿಕೆಗಳ ಮತ್ತು ಉತ್ತರ ಪತ್ರಿಕೆಗಳ ಮುದ್ರಣ ಮತ್ತು ಅಂಕಪಟ್ಟಿಯನ್ನು ಸಿದ್ಧಪಡಿಸುವುದೇ ಮುಂತಾದ ಪರೀಕ್ಷೆಗೆ ಸಂಬಂಧಿಸಿದ ಕಾರ್ಯವನ್ನು ಮತ್ತು ಅದಕ್ಕೆ ಪ್ರಾಸಂಗಿಕವಾದ ಮತ್ತು ಅದಕ್ಕೆ ಸಂಬಂಧಿಸಿದಂಥ ಎಲ್ಲ ಚಟುವಟಿಕೆಗಳನ್ನು ವಹಿಸಲಾಗಿದೆಯೋ ಆ ವ್ಯಕ್ತಿಯು, ಅಂಥ ಕರ್ತವ್ಯಗಳನ್ನು ಶೈಕ್ಷಣಿಕ ಗುಣಮಟ್ಟಗಳನ್ನು ಸಾಧಿಸುವುದಕ್ಕಾಗಿ ವಿವೇಕದಿಂದ ಮತ್ತು ಅತ್ಯಂತ ಪ್ರಾಮಾಣಿಕತೆಯಿಂದ ನಿರ್ವಹಿಸತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಪರೀಕ್ಷಾ ಕಾರ್ಯವನ್ನು ಹಂಚಿಕೆ ಮಾಡಲಾಗಿರುವ ಯಾವೊಬ್ಬ ವ್ಯಕ್ತಿಯು, ಕರ್ತವ್ಯಗಳ ಉಲ್ಲಂಘನೆಯ ತಪ್ಪಿತಸ್ಥನೆಂದು ಕಂಡು ಬಂದರೆ ಅಥವಾ ದುರ್ನಡತೆಯಲ್ಲಿ ಪಾಲ್ಗೊಂಡಿದ್ದರೆ, ಅಪರಾಧ ನಿರ್ಣಯವಾದ ತರುವಾಯ, ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಎರಡು ಸಾವಿರ ರೂಪಾಯಿಗಳ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡಿತನಾಗತಕ್ಕದ್ದು.

